

# ಜಾನಪದ ಹಾಡುಗಳಲ್ಲಿ ಅಂಬೇಡ್ಕರ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ
ಬೀದರ ಇವರಿಗೆ, ಎಂ.ಫಿಲ್. ಆಂಶಿಕ ಪದವಿಗಾಗಿ
ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ವನಿತಾ ಬಿಜಾಪುರೆ ರಾಮ

ಮಾರ್ಗದರ್ಶಕರು
ಡಾ. ಮೀನಾಕ್ಷಿ ಬಾಳಿ
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ



ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಸೆಪ್ಟೆಂಬರ್ ೨೦೦೯



# ಜಾನಪದ ಹಾಡುಗಳಲ್ಲಿ ಅಂಬೇಡ್ಕರ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ, ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)




ಸಂಶೋಧಕರು

ವನಿತಾ ಬಿಜಾಪುರೆ ರಾಮ

ಸಂಶೋಧನ ಮಾರ್ಗದರ್ಶಕರು

ಡಾ. ಮೀನಾಕ್ಷಿ ಬಾಳಿ

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ





ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಸೆಪ್ಟೆಂಬರ್ ೨೦೦೯

# ಪ್ರಮಾಣ ಪತ್ರ

**"ಜಾನಪದ ಹಾಡುಗಳಲ್ಲಿ ಅಂಬೇಡ್ಕರ"** ಎಂಬ ನಿಬಂಧವನ್ನು ಡಾ.ಮೀನಾಕ್ಷಿ ಬಾಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Vanita. R

ಸ್ಥಳ : ಬೀದರ
ದಿನಾಂಕ : 3-10-2009

**ವನಿತಾ ಬಿಜಾಪುರೆ ರಾಮ**
ಎಂ.ಫಿಲ್.ವಿದ್ಯಾರ್ಥಿ
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ,
ಬೀದರ

# ಮಾರ್ಗದರ್ಶಕರ ಪ್ರಮಾಣ ಪತ್ರ

**"ಜಾನಪದ ಹಾಡುಗಳಲ್ಲಿ ಅಂಬೇಡ್ಕರ"** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ವನಿತಾ ಬಿಜಾಪುರೆ ರಾಮ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಬೀದರ
ದಿನಾಂಕ : 29-09-09

**ಡಾ. ಮೀನಾಕ್ಷಿ ಬಾಳಿ**
ಮಾರ್ಗದರ್ಶಕರು
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ
ಬೀದರ

# ಪರಿವಿಡಿ

## ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ಮಹತ್ವ

ಆದಿ ಅನಾದಿಕಾಲದಿಂದಲೂ ಬೇರೂರಿದ್ದ ಅಸಮಾನತೆಯನ್ನು ಹೋಗಲಾಡಿಸಬೇಕೆಂದು ನಿರಂತರವಾಗಿ ಹೋರಾಟ ಮಾಡಿದವರು ಡಾ.ಬಿ.ಆರ್.ಅಂಬೇಡ್ಕರ್. ಇಂದು ಭೀಮಬಾಬಾರ ಅಭಿಮಾನಿಗಳಿಂದ ದಲಿತ ಸಂಘರ್ಷ, ಸಮಿತಿ, ದಲಿತ ಸೇನಾ, ದಲಿತ ಹಿತರಕ್ಷಣಾ ವೇದಿಕೆ ದಲಿತ ಸಮಿತಿ ಮುಂತಾಗಿ ಹಲವಾರು ಸಂಘಟನೆಗಳು ಹೈದರಬಾದ ಕರ್ನಾಟಕ ಭಾಗಗಳಲ್ಲಿ ರಚನೆಗೊಂಡಿವೆ. ಈ ಭಾಗದಲ್ಲಿ ದಲಿತರಲ್ಲಿ ಅನ್ಯಾಯ ವಿರುದ್ದ ಪ್ರಶ್ನಿಸುವ ಪ್ರಜ್ಞೆ ರೂಪಗೊಂಡಿದೆ. ನಾನು ಕ್ಷೇತ್ರಕಾರ್ಯಕ್ಕಾಗಿ ಹೋಗಿದಾಗ ಗಮನಿಸಿದ ಪ್ರಮುಖ ಅಂಶವೆಂದರೆ ದಲಿತರಲ್ಲಿ ಅಂಬೇಡ್ಕರರು ಇನ್ನು ಜೀವಂತರಾಗಿದ್ದಾರೆ ಎಂಬ ಭಾವ.

ಬಾಬಾ ಸಾಹೇಬರ ಜೀವಿತಾವಧಿಯಲ್ಲಿ ನಡೆಸಿದ ಹೋರಾಟ ಮತ್ತು ಅದರ ಪರಿಣಾಮದಿಂದ ಪ್ರೇರೇಪಿತರಾದ ದಲಿತರು ಅವರ ಮೇಲಿರುವ ಭಕ್ತಿ, ಅಭಿಮಾನಗಳಿಂದ ನಿದ್ದೆಯಿಂದ ಎದ್ದು ಜಾಗೃತಗೊಂಡಿದ್ದಾರೆ. ಅವರು ಬುದ್ಧ ವಿಹಾರ, ಬುದ್ಧ ಸಂಘಗಳನ್ನು ಸ್ಥಾಪಿಸಿ ತಮ್ಮ ಅಸ್ತಿತ್ವವನ್ನು ಹುಡುಕುತ್ತಿದ್ದಾರೆ. ಅಂಬೇಡ್ಕರ ಹಾಡುಗಳಲ್ಲಿ ಭಜನೆ ಹಾಡುಗಳು, ಸಾಂಪ್ರದಾಯಿಕ ಹಾಡುಗಳು, ಪ್ರಸ್ತುತ ಸಂದರ್ಭದಲ್ಲಿ ದಲಿತರು ಎಚ್ಚೆತ್ತ ಪ್ರಜ್ಞೆಯೊಂದಿಗೆ ರಾಜಕೀಯ ಶಕ್ತಿಯಾಗುವ ತನ್ಮೂಲಕ ಸಮಾಜೋಧಾರ್ಮಿಕ ಸಂರಚನೆಗಳಲ್ಲಿ ತಲಸ್ಪರ್ಶಿ ಬದವಾವಣೆ ತರಬೇಕೆಂಬ ತುಡಿತದಲ್ಲಿ ಇದ್ದಾರೆ. ಬದಲಾವಣೆಗಾಗಿ ನಡೆಸುತ್ತಿರುವ ವಿದ್ಯಮಾನಗಳೇ ಹಲವು ಹತ್ತು ಬಗೆಯ ಸಾಂಘಿಕ ಚಟುವಟಿಕೆಗಳಾಗಿ ರೂಪುತಳೆಯುತ್ತಿವೆ. ಭಾವುಕ ಪರಿಸರದಲ್ಲಿಯೇ ತಮ್ಮ ಅಸ್ತಿತ್ವವನ್ನು ಕಾದಿಟ್ಟುಕೊಳ್ಳುವ ಸ್ಥಳಿಯರಿಗೆ – ಭಜನೆ, ಜಾತ್ರೆ, ಖಾಂಡದಂಥ ಪ್ರಸಂಗಗಳಲ್ಲಿ ಆವಶ್ಯಕ ಬದುಕಿನ ನಡೆಗಳಾಗಿ ಒದಗಿ ಬಂದಿವೆ. ಆದ್ದರಿಂದಲೇ ಅವರು ಪರಂಪರಾಗತ ಭಜನಾ ಮೇಳಗಳಲ್ಲಿ ಬಾಬಾಸಾಹೇಬರನ್ನು ಕುರಿತು ಪದರಚಿಸಿ ಹಾಡುವಲ್ಲಿ ಯಾವುದೇ ಅನಿವರ್ತನೀಯ ಆನಂದ ಅನುಭವಿಸುತ್ತಿದ್ದಾರೆ. ತತ್ವಪದಗಳು, ಭಕ್ತಿ ಪ್ರಧಾನವಾದ ಹಾಡುಗಳು ವಿಲಿನಗೊಂಡಿವೆ. ಕ್ಷೇತ್ರಕಾರ್ಯ ಆರಂಭಿಸಿ ನಾನು ಹಾಡುಗಳನ್ನು ಸಂಗ್ರಹಮಾಡುವಾಗ ಒಂದು ವಿಶೇಷವಾದ 'ದಲಿತ ಲೋಕ'ವನ್ನೇ ಕಂಡುಕೊಂಡೆನು. ಜನರನ್ನು ಆಕರ್ಷಿಸಿಸಲು ಸಿನಿಮಾ ಹಾಡುಗಳ ದಾಟಿಯಲ್ಲಿ ಹಾಡುತ್ತಾರೆ. ಕಾರಣ ಇಂದು ಸಮೂಹ ಮಾಧ್ಯಮ ಇಡೀ ಜಗತ್ತನ್ನು ಆಕರ್ಷಿಸುತ್ತಿದೆ, ಇದಕ್ಕೆ ದಲಿತರು ಸಹ ಹೊರತಾಗಿಲ್ಲ.

ಹಾಡುಗಳ ಸಂಗ್ರಹಕಾರ್ಯ ನನಗೆ ಮತ್ತಷ್ಟು ಹೆಚ್ಚು ಆಸಕ್ತಿಯನ್ನು ಕೆರಳಿಸಿತು. ಅಂಬೇಡ್ಕರ ಹಾಡುಗಳು ನನ್ನನ್ನು ಬಾಲ್ಯದಿಂದಲೇ ಆಕರ್ಷಿಸಿದವು. ಬಾಬಾ ಸಾಹೇಬರ ಕಾರ್ಯ ಸಾಧನೆಗಳು ಕೇವಲ ಬರಹ ಪುಸ್ತಕಗಳಿಗೆ ಸೀಮಿತವಾಗದೆ, ಜನಪದರ ಜೀವನದಲ್ಲೂ ಅವರು ಯಾವ ರೀತಿ ಹಾಸುಹೊಕ್ಕಾಗಿ ರೂಪಗೊಂಡಿದ್ದಾರೆಂದು ತಿಳಿಯುವ ಕುತೂಹಲವಾಯಿತು. ಭೀಮರ ಹಾಡುಗಳಲ್ಲಿ ಮುಗ್ದ ಹಳ್ಳಿಗರ ಭಕ್ತಿ, ಅಭಿಮಾನವನ್ನು ತಿಳಿಯುವ ಕಾತುರ ಉಂಟಾಯಿತು.

**ಮಹತ್ವ :**

ಭಕ್ತ ದಲಿತರು ತಮ್ಮ ಹಾಡುಗಳಲ್ಲಿ ಹಾಗೂ ಜೀವನದಲ್ಲಿ ಭೀಮರು ದಲಿತರ ಪಾಲಿಗೆ ಬಹಳ ಮೇಲು ಸ್ಥಾನದಲ್ಲಿ ನಿಂತಿರುವ ದೇವರಾಗಿದ್ದಾರೆ. ದಲಿತರ ಹಾಡುಗಳಲ್ಲಿ ಬಾಬಾಸಾಹೇಬರು ನಾಯಕರಾಗಿದ್ದಾರೆ. ಈ ಹಾಡುಗಳನ್ನು ಪಂಡಿತ–ಪಾಮರ, ಅಕ್ಷರಸ್ಥ, ಅನಕ್ಷರಸ್ಥ, ಗಂಡು, ಹೆಣ್ಣು ಎಂಬ ಭಾವ ಇಲ್ಲದೆ ಹಾಡುವುದು ವಿಶೇಷವಾಗಿದೆ. ಭಜನೆ ಮೇಳಗಳು, ಗುಡಿ ಗುಂಡಾರ, ಖಾಂಡ, ಜಾತ್ರೆ, ಪುಣ್ಯತಿಥಿ ಅಂತಹ ಹಲವು ಕಾರ್ಯಕ್ರಮಗಳಲ್ಲಿ ವಿಶೇಷವಾಗಿ ಹಾಡುತ್ತಾರೆ. ಈ ಹಾಡುಗಳಿಂದ ಗ್ರಾಮೀಣ ಪ್ರದೇಶದ ದಲಿತರ, ಸ್ವಾಭಿಮಾನ, ಭೀಮರ ಆದರ್ಶವಾದಿ ನವ ಭಾರತ ನಿರ್ಮಾಣದ ಪರಿಕಲ್ಪನೆ ಅರಿವಿಗೆ ಬರುತ್ತದೆ. ಭಜನೆ ಮೇಳ ಮತ್ತು ಬುದ್ಧ ವಿಹಾರಗಳನ್ನು ಬೀದರ ಜಿಲ್ಲೆಯ ರಾಜೇಶ್ವರ, ಆಣದೂರ, ಸಿಂದಬಂದಿಗಿ, ಹಳ್ಳಿಖೇಡ, ಮನ್ನಾಎಖ್ಖೇಳಿ, ಚಿಟಗುಪ್ಪಾ, ಧನ್ನೂರ, ಇಂಚುರ, ಮಂಠಾಳ, ಚಿದ್ರಿ, ಚಿಲ್ಲರ್ಗಿ, ಹಿಲಾಲಪೂರ ಎಂಬ ಹಲವಾರು ಗ್ರಾಮಗಳಲ್ಲಿ ಭಜನೆ ಮೇಳ ಮತ್ತು ವಿಹಾರಗಳಿವೆ. ಈ ಹಾಡುಗಳಲ್ಲಿ ಭಕ್ತಿ ಮತ್ತು ನೀತಿಯನ್ನು ಹೊಂದಿರುವ ಹಾಡುಗಳಾಗಿದ್ದು ಇವುಗಳ ಆಳವಾದ ಅಧ್ಯಯನ ಮಾಡಬೇಕಾಗಿದೆ. ಭೀಮ ಬಾಬಾರ ಗೀತೆಗಳನ್ನು (ಮೌಖಿಕ) ಸಂಗ್ರಹಿಸಿ, ರಕ್ಷಣೆಮಾಡಿ ಸಮಾಜಕ್ಕೆ ಕೊಡುಗೆಯಾಗಿ ನೀಡುವುದು ನನ್ನ ಅಧ್ಯಯನದ ಉದ್ದೇಶ, ಹಾಗೇ ನೋಡಿದರೆ ಹೈದ್ರಾಬಾದ ಕರ್ನಾಟಕವೆಂದು ಕರೆಸಿಕೊಳ್ಳುತ್ತಿರುವ ಗುಲ್ಬರ್ಗಾ, ರಾಯಚೂರ, ಕೊಪ್ಪಳ, ಬೀದರ ಮುಂತಾದ ಎಲ್ಲ ಜಿಲ್ಲೆಗಳ ಬಹುತೇಕ ಗ್ರಾಮಗಳಲ್ಲಿ ದಲಿತ ಭಜನಾ ಮೇಳಗಳು ಇದ್ದೇ ಇರುತ್ತವೆ. ಈ ಭಾಗದಲ್ಲಿ ಮಧ್ಯಕಾಲೀನ ಭಕ್ತಿ ಚಳುವಳಿಯ ದಟ್ಟ ಪ್ರಭಾವ ಗಟ್ಟಿಗೊಂಡಿದೆ. ವೈದಿಕ ವಿರೋಧಿ ಶೂದ್ರ ಚಳುವಳಿಯ ಭಾರತದಾದ್ಯಂತ ಪಸರಿಸುತ್ತಿರುವ ಹೊತ್ತಲ್ಲಿ ಕರ್ನಾಟಕದ ಈ ನೆಲ ಅಂದರೆ ವಿಶೇಷವಾಗಿ ಧರಿನಾಡು ಎಂದು ಕರೆಸಿಕೊಳ್ಳುತ್ತಿರುವ ಬೀದರ ಜಿಲ್ಲೆಯ ವಚನಕಾರರ ಕ್ರಾಂತಿಯ ನೆಲೆವೀಡಗಿತ್ತು. ಕನ್ನಡ ನಾಡು ಒಳಗೊಂಡಂತೆ ಇಡೀ ಭಾರತೀಯ ಸಾಹಿತ್ಯ ಪರಂಪರೆಯಲ್ಲಿಯೇ ಅಪರೂಪ ಮತ್ತು ಮೌಲಿಕವೆಂಬಂತೆ ಕಾಯಕ ಜೀವಿಗಳ ಶರಣ ಚಳುವಳಿಯು ಘಟಿಸಿ ಹೋಗಿದೆ. ವಚನ ಚಳುವಳಿಯ ಚುಂಗು ಹಿಡಿದ ತತ್ವಪದಗಳ ಸೃಷ್ಟಿಯು ಇದೇ ನೆಲದಲ್ಲಿಯೇ ಸಾಗಿಕೊಂಡು ಬರುತ್ತಿದೆ. ಎಲ್ಲಾ ಜಾತಿ, ಮತ, ಪಂಥ, ವರ್ಗಗಳಿಂದ ಬಂದ ಶ್ರೀ ಸಾಮಾನ್ಯರು ತಮ್ಮ ತಮ್ಮ ಇಷ್ಟದೇವತೆ, ತಮ್ಮ ತತ್ವ–ಸಿದ್ಧಾಂತಗಳನ್ನು ಕುರಿತು ಪದ ರಚಿಸುತ್ತಲೇ ಬರುತ್ತಿದ್ದಾರೆ. ವಿಶೇಷವಾಗಿ ಶ್ರದ್ಧಾವಂತ ಜನಪದರು ಈ ತತ್ವಪದ ಪ್ರಕಾರವನ್ನು ಹೆಚ್ಚು ಬೆಳೆಸಿ, ಉಳಿಸಿಕೊಂಡು ಬರುತ್ತಿದ್ದಾರೆ.

ತತ್ವಪದಗಳನ್ನು ರಚಿಸುವವರು ಸಾಮಾನ್ಯವಾಗಿ ಹಾಡುಗಾರರೂ ಆಗಿರುತ್ತಾರೆ. ಭಜನಾಪರಂಪರೆಯ ಚಳುವಳಿಯಾಗಿ ಈ ಹಾಡುಗಾರರು ಅಸ್ತಿತ್ವಕ್ಕೆ ಬರುತ್ತಾ ಹೋಗುತ್ತಾರೆ. ಹೀಗಾಗಿ ಈ ಭಾಗದಲ್ಲಿ ದಟ್ಟವಾದ, ವೈವಿಧ್ಯಪೂರ್ಣವಾದ ಭಜನಾಪರಂಪರೆಯೊಂದು ಕಾಲಕ್ಕೆ ತಕ್ಕ ಹೊಸ ಹೊಸ ಆಯಾಮಗಳನ್ನು ಪಡೆದುಕೊಳ್ಳುತ್ತ ಗಟ್ಟಿಯಾಗುತ್ತಲೆ ಬರುತ್ತಿದೆ. ಭಜನೆ ಪರಂಪರೆಯ ಹಲವು ಆಯಾಮಗಳಲ್ಲಿ ದಲಿತ ಲೋಕವು ಆಧುನಿಕ ಮತ್ತು ಆಧುನಿಕೋತ್ತ ಕಾಲ ಘಟ್ಟಗಳಲ್ಲಿ ಬಾಬಾ ಸಾಹೇಬ ಅಂಬೇಡ್ಕರ ಅವರನ್ನು ಕುರಿತು ಪದರಚಿಸುವಲ್ಲಿ, ಅವುಗಳನ್ನು ಜೀವಸಂವೇದಿ ನೆಲೆಗಳಲ್ಲಿ ಹಾಡುಗಾರಿಕೆಗೆ

ಬಗ್ಗಿಸಿಕೊಳ್ಳುವಲ್ಲಿ ತೀವ್ರತರವಾದ ಸ್ವಾಭಿಮಾನವನ್ನು ಅನುಭವಿಸುತ್ತಿದ್ದಾರೆ. ವಿಶೇಷವಾಗಿ ಬೀದರ ಜಿಲ್ಲೆಯ ಪ್ರತಿಯೊಂದು ಹಳ್ಳಿಗಳಲ್ಲಿ ಅಂಬೇಡ್ಕರ ಅವರನ್ನು ಕುರಿತು ಪದ ರಚಿಸುವುದು ಮತ್ತು ವಿಶೇಷ ಸಂದರ್ಭಗಳಲ್ಲಿ ಹಾಡುವುದನ್ನು ದಲಿತರು ವೃತದಂತೆ ಪಾಲಿಸಿಕೊಂಡು ಬರುತ್ತಿದ್ದಾರೆ. ಈ ಎಲ್ಲಾ ಪದಗಳ ವಸ್ತು, ಶೈಲಿ, ಪ್ರಯೋಗ, ಪರಿಣಾಮಗಳನ್ನು ಕುರಿತು ಅಧ್ಯಯನ ಮಾಡುವ ಜರೂರಿ ಇದೆ. ದಲಿತ ಲೋಕದ ಚಾರಿತ್ರಿಕ ನಡೆಯನ್ನು ಗುರುತಿಸಲು ಈ ತರದ ಅಧ್ಯಯನಗಳು ಅತ್ಯಂತ ಉಪಯುಕ್ತವಾಗಬಲ್ಲವು ಎಂಬ ಮಹತ್ವಾಕಾಂಕ್ಷೆಯಿಂದ ನಾನು ಈ ಕಾರ್ಯವನ್ನು ಕೈಗೆತ್ತಿಕೊಂಡಿದ್ದೇನೆ.

# ಅಧ್ಯಾಯ – ೨

## ಜನಪದ ಕವಿಗಳು ಕಂಡಂತೆ ಬಾಬಾ ಸಾಹೇಬರ ಬದುಕು–ಬವಣೆ

ಜನಪದ ಕವಿ ನಿಸರ್ಗ ಸಹಜವಾದ ಕವಿ ತಾನು ಕಂಡು ಅನುಭವಿಸಿದ್ದನ್ನು ಮುಚ್ಚು ಮರೆಯಿಲ್ಲದೆ, ಮೌಖಿಕ ಅಥವಾ ಲಿಖಿತವಾಗಿ ಅಭಿವ್ಯಕ್ತ ಗೊಳಿಸಿತ್ತಾನೆ. ಬಾಬಾ ಸಾಹೇಬರ ಕಾಲ ಆಧುನಿಕ ಕಾಲವಾಗಿರುವುದರಿಂದ ಅವರ ಬದುಕಿನ ವಿವರಗಳು ಸ್ಪಷ್ಟವಾಗಿ ಗೋಚರವಾಗುತ್ತವೆ. ದಲಿತ ಕವಿಗಳಿಗೆ ಅಂಬೇಡ್ಕರರು ವರಪುತ್ರರಾಗಿ, ಪವಾಡ ಪುರುಷರಾಗಿ ಕಾಣುತ್ತಾರೆ. ಅಲ್ಲದೆ ಹೋರಾಟಗಾರರಾಗಿ, ದೇವತಮಾನವರಾಗಿ, ತಂದೆ–ತಾಯಿಗಿಂತ ಹೆಚ್ಚಾಗಿ ಪ್ರೀತಿ ಗೌರವದಿಂದ ಕಾಣುತ್ತಾರೆ. ಇಂದು ದಲಿತರು ವೈದಿಕ ಸಂಸ್ಕೃತಿಯ ತಿರಸ್ಕಾರ ಮಾಡಿ ಬೌದ್ಧ ಧರ್ಮದತ್ತ ವಾಲುತ್ತಿರುವುದು ಅವರ ಮಹಾಸಾಧನೆಯಾಗಿದೆ. ಇದಕ್ಕೆ ಪ್ರೇರಣೆಯಾಗಿ ನಿಂತವರೇ ಡಾ.ಬಾಬಾಸಾಹೇಬ ಅಂಬೇಡ್ಕರರು. ಆಧುನಿಕೋತ್ತರ ಭಾರತ ಕಂಡ ವೈದಿಕ ವಿರೋಧಿ ಚಳುವಳಿಗಳಲ್ಲಿ ಇದು ಗಮನಾರ್ಹವಾದುದು ಬಾಬಾಸಾಹೇಬರ ಈ ಸಾಧನೆ ಸಿದ್ಧಿಯಲ್ಲಿ ಕುರಿತು ಬೀದರ ಜಿಲ್ಲೆಯಲ್ಲಿ ಹಲವಾರು ಜಾನಪದ ಕವಿಗಳು ಕೃತಿ ರಚಿಸಿದ್ದಾರೆ. ಕೆಲವು ಪ್ರಮುಖ ಕವಿಗಳನ್ನು ಇಲ್ಲಿ ಗಮನಿಸಲಾಗಿದೆ.

**ಜನಪದ ಕವಿಗಳು :**

**೧) ಆರತಿ ಲಕ್ಷ್ಮಣ ಕಾಂಬಳೆ:**

"ನಾನು ಬೀದರ ಜಿಲ್ಲೆಯ ಮಂಠಾಳ ಗ್ರಾಮಕ್ಕೆ ಸಂದರ್ಶಿಸಿದಾಗ ಭೇಟಿಯಾದ ಆರತಿ ಬಾಯಿಯವರು ಒಳ್ಳೆಯ ಬರಹಗಾರ್ತಿ ಹಾಗೂ ಗಾಯಕಿಯಾಗಿದ್ದಾರೆ. ಇವರು ಬಿ.ಎ.ಪದವಿ ಮುಗಿಸಿ, ಸದ್ಯ ಗೃಹಿಣಿಯಾಗಿದ್ದಾರೆ. ತಂದೆಯವರ ಪ್ರಭಾವ ಇವರ ಮೇಲೆ ಅಗಾಧವಾಗಿ ಬೀರಿದ ಕಾರಣ ಇವರು ಸಹ ಬಾಬಾ ಸಾಹೇಬರ ಹಾಡುಗಳನ್ನು ರಚಿಸುತ್ತಾರೆ. ಬಾಬಾ ಭೀಮರ ಜೀವನ, ಕಾರ್ಯಸಾಧನೆ ಹಾಗೂ ಬಾಬಾ ಸಾಹೇಬರ ಬಗ್ಗೆ ಅಪಾರ ಅಭಿಮಾನ, ಭಕ್ತಿ ಒಳಗೊಂಡ ಹಾಡುಗಳನ್ನು ರಚಿಸುತ್ತಾರೆ. ಅಲ್ಲದೆ ಇವರು ಕನ್ನಡ, ಮರಾಠಿ, ಹಿಂದಿ, ಭಾಷೆಗಳಲ್ಲಿ ಹಾಡುಗಳನ್ನು ಸಲಿಲವಾಗಿ ರಾಗಬದ್ಧವಾಗಿ ಹಾಡುತ್ತಾರೆ. ಅಂಬೇಡ್ಕರರ ಕುರಿತು "ಮಾನವ ರೂಪ ಪಡೆದ ದೇವರು ಬಾಬಾ ಸಾಹೇಬರು ಇವರು ಇಲ್ಲದಿದ್ದರೆ ನಾವು ಇಂದು ಸಮಾಜ ತುಳಿತಕ್ಕ ಒಳಗಾಗಿ ನರಕ ಜೀವನ ಅನುಭವಿಸಬೇಕಾಗುತ್ತಿತ್ತು. ಆದರೆ ಬಾಬಾ ಸಾಹೇಬರು ಪವಾಡ ಪುರುಷರಾಗಿ ಬಂದು, ನಮಗೆ ಸಮಾಜದಲ್ಲಿ ಗೌರವ, ಅಧಿಕಾರ, ಸಮಾನತೆ, ಮಿಸಲಾತಿ, ಹಕ್ಕುಗಳನ್ನು ನೀಡಿದ ಮಹಾಪುರುಷರೆಂದು ಅಭಿಮಾನದಿಂದ ಹೇಳುತ್ತಾರೆ." [೧]

**೨) ಕಮಲಮ್ಮ ಚಂದ್ರಕಾಂತ ಭಾವಿಕಟ್ಟಿ:**

"೧೨ ವರ್ಷಗಳು ಹಾಡಿನ ಅನುಭವ ಹೊಂದಿರುವ ಕಮಲಮ್ಮನವರು ಬೀದರ ಜಿಲ್ಲೆಯ ಧನ್ನೂರ ಗ್ರಾಮದ ನಿವಾಸಿಯಾಗಿದ್ದಾರೆ. ಅನಕ್ಷರಸ್ಥರಾದ ಇವರು ಕೂಲಿ, ಕೃಷಿ, ಕೆಲಸ ಗಳನ್ನು ಮಾಡುತ್ತಾರೆ. ಹಾಡಿನಿಂದ ಅನುಭವ ಪಡೆದು, ಬೌದ್ಧ ಧರ್ಮ ತತ್ವಗಳನ್ನ ತಪ್ಪದೆ ಪಾಲಿಸುತ್ತಾರೆ. ಭೀಮರ ಕುರಿತು "ಬಾಬಾ ಸಾಹೇಬರನ್ನು ಎಷ್ಟು ವರ್ಣಿಸಿದರೂ ಸಾಲದು, ಅವರು ನಮಗೆ ಎಲ್ಲಾ ಸೌಕಾರ್ಯ ನೀಡಿದ ಜ್ಞಾನದ ದೇವರು, ಅವರ ಆರ್ಶೀವಾದ ಸದಾ ನಮ್ಮ ಮೇಲೆ ಇರಲಿ, ಹಾಗೂ ಅವರು ಒಮ್ಮೆಯಾದರೂ ಮರಳಿ ಬರಲಿ ಎಂದು ಆಶಯ ಹೊಂದಿದ್ದಾರೆ. ಬಾಬಾ ಸಾಹೇಬರ ದರ್ಶನ ಪಡೆಯಲು ಜೀವನದ ಕೊನೆ ಉಸಿರಿನವರೆಗೂ ದಾರಿನೋಡುತ್ತೇನೆ ಎಂದು ಮುಗ್ಧ ಭಕ್ತಿಯಿಂದ ಹೇಳುತ್ತಾರೆ." [೨]

---

೧.ಕ್ಷೇತ್ರ ಕಾರ್ಯದಲ್ಲಿ ಹೇಳಿದವರು 'ಆರತಿಬಾಯಿ ಮು.ಮಂಠಾಳ', ಬೀದರ. ದಿ :೧೫–೦೭–೦೯ರಂದು ಸಂದರ್ಶಿಸಲಾಗಿದೆ

೨.ಕ್ಷೇತ್ರ ಕಾರ್ಯದಲ್ಲಿ ಹೇಳಿದವರು 'ಕಮಲಮ್ಮ ಮು.ಧನ್ನೂರ, ಬೀದರ ದಿ : ೨೪–೦೪–೦೯ರಂದು ಭೇಟಿ ಮಾಡಲಾಯಿತು.

## ➢ ಜನಪದ ಮತ್ತು ಜಾನಪದದ ಅರ್ಥ :

"ಕೋಟ್ಯಾನುಕೋಟಿ ವರ್ಷಗಳ ಹಿಂದೆ ಸೂರ್ಯನಿಂದ ಸಿಡಿದು ಬಂದ ಅಂಶದಿಂದ ಕಾಲಗರ್ಭದಲ್ಲಿ ರೂಪುಗೊಂಡ ಭೂಮಿ ಜೀವಸಂತಾನಕ್ಕೆ ಆಶ್ರಯ ನೀಡಿತು. ಭೂ ಸೃಷ್ಟಿಯ ಎಷ್ಟೋ ವರ್ಷಗಳ ಮೇಲೆ ಮನುಷ್ಯ ಸೃಷ್ಟಿಯಾಯಿತು. ಭೂಭಾಗದಲ್ಲಿ ನಿರ್ದಿಷ್ಟ ಪ್ರದೇಶದಲ್ಲಿ ನಿರ್ದಿಷ್ಟ ಜನಸಮುದಾಯ ಪದಾದವೂರಿದ್ದ ಜನಪದ. ಜನರು ಮತ್ತು ಜನರ ಬದುಕು ಜನಪದವಾಯಿತು. ಜನಪದ ಶಬ್ದ ಸರಳವೂ ಹೌದು, ಸಂಕೀರ್ಣವೂ ಹೌದು. ಇದರಲ್ಲಿ ಜನರ ಭಾಷೆ, ಆಚಾರ–ವಿಚಾರ, ಕಲೆ–ಸಾಹಿತ್ಯ ಅಡಕವಾಗಿವೆ. ಸಂಸ್ಕೃತ ಭಾಷೆಯಲ್ಲಿ 'ಜನಪದ' ಶಬ್ದ ಬಳಕೆಯಲ್ಲಿದೆ. ಇಂಗ್ಲೀಷಿನ 'Folk' ಶಬ್ದಕ್ಕೆ ಸಮಾನಾರ್ಥಕವಾಗಿ, ಈಗ ಜನಪದ ಎಂಬ ಶಬ್ದ ಕನ್ನಡದಲ್ಲೂ ಸಹಜವಾಗಿ ಬಳಕೆಯಾಗುತ್ತಿದೆಡ. ಜನಪದ ನಿಂತ ನೀರಲ್ಲ, ಸ್ವಾರ್ಥಮೂಲವಾದದ್ದೂ ಅಲ್ಲ, ಸ್ವೀಕಾರ, ಚಲನೆ, ಪರಿವರ್ತನ, ಕೊಳುಕೊಡೆ ಅದರ ಮೂಲಮಂತ್ರ. ಜನಪದದ ವಿಕಾಸರೂಪವಾದ ಶಿಷ್ಟಪದ ವಿಜೃಂಭಿಸಿದಾದ ಜನಪದ ಹಿಂದೆ ಸರಿದರೂ ತನ್ನ ಸಂಪೂರ್ಣ ಅಸ್ತಿತ್ವವನ್ನು ಅಳಿಸಿಕೊಳ್ಳುವುದಿಲ್ಲ.

ಸಂಕೀರ್ಣ ಸ್ವಭಾವದ ಶಿಷ್ಟಪದದಲ್ಲಿ ನಾಗರಿಕವಾದದ್ದರಲ್ಲಿ ಸಮಾಜದ ಕೆಳಸ್ತರ, ಶಿಷ್ಟಪದದ ಮೂಲಗುಂಪು ಅದರ ಸಂಸ್ಕೃತಿ ಜನಪದವೇ ಎಂಬುದನ್ನು ಮರೆಯುವಂತಿಲ್ಲ. ಎಂತಹ ನಾಗರಿಕ ಸಂದರ್ಭದಲ್ಲೂ ಜನಪದ ಜೀವಂತವಾಗಿರುವುದನ್ನು ಗುರ್ತಿಸಬಹುದು. 'ಜನಪದ' ಎಂಬ ಶಬ್ದ ಈಚೆಗೆ ವ್ಯಾಪಕವಾದ ಅರ್ಥದಲ್ಲಿ ಬಳಕೆಯಾಗುತ್ತಿರುವುದಷ್ಟೇ ಅಲ್ಲ, ವಿವಿಧ ಆಯಾಮಗಳನ್ನು ಪಡೆದುಕೊಂಡಿದೆ".[೩]

## ➢ ಜಾನಪದ ಅರ್ಥ :

"ಜನಪದಕ್ಕೆ ಸಂಬಂಧಿಸಿದ್ದು ಜಾನಪದ. ಜಾನಪದದ ಸಮಸ್ತವನ್ನು ಒಳಗೊಂಡಿದ್ದು ಜಾನಪದ. ತಲೆ–ತಲೆ ಮಾರಿನಿಂದ ಸಾಗುವ ನೆನಪಿನ ನಿಧಿಯೇ ಜಾನಪದ. ಜಾನಪದವು ಇಂಗ್ಲೀಷ್ ಭಾಷೆಯಲ್ಲಿ 'Folk lore' ಎಂಬ ಶಬ್ದಕ್ಕೆ ಸಮಾನವಾಗಿದೆ. ಈ ಇಂಗ್ಲೀಷ ಪದವನ್ನು ಇಂಗ್ಲೆಂಡಿನ ಡಬ್ಲ್ಯು.ಜಿ. ಥಾಂಸ್ .ಎಂಬುವರು ೧೮೪೬ರಲ್ಲಿ ಸೃಷ್ಟಿ ಮಾಡಿದರು. ಕನ್ನಡದಲ್ಲಿ ಡಾ. ಹಾ.ಮಾ. ನಾಯಕರು 'ಜಾನಪದ'ವನ್ನು ಮೊದಲ ಬಾರಿಗೆ ಪ್ರಯೋಗಕ್ಕೆ ತಂದರು. ಮನುಕುಲದ ವೈಜ್ಞಾನಿಕ ಜ್ಞಾನ ಶಾಖೆಗಳಲ್ಲಿ ಜಾನಪದ ಗಮನಾರ್ಹವಾಗಿದೆ. ಜಾನಪದವನ್ನು ಒಂದು ವಿಜ್ಞಾನವೆಂದು ಪರಿಗಣಿಸಿ ವೈಜ್ಞಾನಿಕವಾಗಿ ಅಭ್ಯಾಸಿಸುವ ಒಲವು ಇಂದು ಹೆಚ್ಚಾಗಿದೆ".[೪]

**ವ್ಯಾಖ್ಯೆಗಳು :**

೧) ಎಡ್ವಿನ್ ಸಿಡ್ನಿ ಹರ್ಟ್ಲ್ಯಾಂಡ್ :

"ಜಾನಪದ ಎನ್ನುವುದು ಸಂಪ್ರದಾಯಗಳ ವಿಜ್ಞಾನ".[೫]

೨) ಆಂಡ್ರೊಲಾಂಗ್ :

"ಜನಾಂಗಗಳ ಪಳೆಯುಳಿಕೆಗಳನ್ನು ಸಂಗ್ರಿಸಿ ಅಧ್ಯಯನ ಮಾಡುವ ವಿಜ್ಞಾನ"[೬] ಜನ ಜೀವನದಲ್ಲಿ ಇಂದಿಗೂ ಕಂಡುಬರುವ, ಆದರೆ, ಈ ಕಾಲದ ವಲ್ಲದ ಕಥೆ, ನಂಬಿಕೆ, ವಿಚಾರಗಳನ್ನು ಕುರಿತು ಈ ವಿಜ್ಞಾನ ಅಧ್ಯಕಯನ ಮಾಡುತ್ತದೆ.

---

೩. ಡಾ.ಡಿ.ಲಿಂಗಯ್ಯ (ಲೇ) ಜಾನಪದ: ಸ್ವರೂಪ ಮತ್ತು ಸಾಹಿತ್ಯ ಪು.೧, ಪ್ರ.ವ.೨೦೦೬

೪. ಅದೇ ಪು.೧

೫,೬ ಅದೇ ಪು.–೫

೩) ಸಿ.ಎಫ್.ಪಾಟರ್ :

"ಜಾನಪದ ಸಾಯಲು ಇಷ್ಟಪಡದ ಜೀವಂತ ಪಳೆಯುಳಿಕೆ". [೭]

೪) ಡಾ. ಹಾ.ಮಾ. ನಾಯಕ :

"ಸಮಾಜದ ವಾಚಕ ಪರಂಪರೆಗಳ ಕಲೆ ಮತ್ತು ನಂಬಿಕೆಗಳ ಮೊತ್ತ". [೮]

ಈವರೆಗೆ ವಿದ್ವಾಂಸರ ಚರ್ಚೆಯ ಸಾರಾಂಶ ಹೀಗದೆ: ಜಾನಪದ ಎನ್ನುವುದು ಒಂದು ಜನತೆಯ ಗ್ರಂಥಸ್ಥವಲ್ಲದ ಸಂಸ್ಕೃತಿಯ ಮೊತ್ತ. ಮೌಖಿಕತೆ, ಪರಂಪರೆ, ಅನಾಮಧೇಯತೆ ಜಾನಪದದ ಮುಖ್ಯ ಲಕ್ಷಣಗಳು. ಜಾನಪದ ಪ್ರಾಚೀನ ಹಾಗೂ ನಾಗರಿಕ ಸಮಾಜಗಳೆರಡರಲ್ಲೂ ಇರುತ್ತದೆ. ಮೌಖಿಕ ಪ್ರಸರಣವೇ ಇದರ ಮುಖ್ಯ ಗುರಿ. ಜಾನಪದದ ಸೃಷ್ಟಿಗೆ ಕಾರಣವಾಗುವ ಬಹುಮುಖ್ಯ ಜನರು ಸಾಮಾನ್ಯವಾಗಿ ಹಳ್ಳಿಗರು. ರೈತರು, ನಾಗರಿಕತೆಯಿಂದ ಹೊರಗಿರುವವರೆ, ನಾಗರಿಕತೆಯ ಒಳಗಿದ್ದರೂ ಹಳೆಯದನ್ನು ಜೀವಂತವಾಗಿ ಉಳಿಸಿಕೊಂಡು ಬರುವವರು, ಗುಡ್ಡಗಾಡಿನ ವಾಸಿಗಳಾದ ಅನಕ್ಷರಸ್ಥರು.

"ಜಾನಪದ ಅಭಿವ್ಯಕ್ತಿಗೊಳ್ಳುವ ಎರಡು ಮುಖ್ಯ ಮಾಧ್ಯಮಗಳೆಂದರೆ ಮಾತು ಕೃತಿ, ಪುರಾಣ, ಐತಿಹ್ಯ, ಕಥೆ, ಗೀತೆ, ಗಾದೆ, ಒಗಟು ಮೊದಲಾದವು, ಶಾಬ್ದಿಕ ಪ್ರಕಾರಗಳಿಗೆ ಮಾಧ್ಯಮವಾದರೆ, ನಂಬಿಕೆ ಸಂಪ್ರದಾಯ, ಚಿತ್ರ, ಆಟ ಮೊದಲಾದವು ಕೃತಿ ಮಾಧ್ಯಮವಾಗುತ್ತದೆ. ಜಾನಪದದಲ್ಲಿ ಮೌಖಿಕ ಮುಖ್ಯವಾದರೂ ಬರಹ, ಪತ್ರಲೇಖನ, ಆಟೋಗ್ರಾಫ್ ಮೊದಲಾದ ಲಿಖಿತ ರೂಪದಲ್ಲಿದ್ದರೆ ಜಾನಪದ ಸಕ್ರಿಯವಾಗಿರುತ್ತದೆ".[೯]

## ➢ ಬೀದರ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ :

ಬೀದರ ಜಿಲ್ಲೆಯು ಕರ್ನಾಟಕ ಭೂಪಟದಲ್ಲಿ ತುತ್ತತುದಿಯ ಕಿರಿಟದಂತಿದೆ. ಈ ಜಿಲ್ಲೆಗೆ ವೈಶಿಷ್ಟಪೂರ್ಣವಾದ ಚಾರಿತ್ರಿಕ ಹಿನ್ನೆಲೆಯಿದೆ. "ಬೀದರ ಜಿಲ್ಲೆಯನ್ನು ಕಲ್ಯಾಣ ಚಾಲುಕ್ಯಕರು, ಬಹುಮನಿಯರು ರಾಜ್ಯ ಆಳಿದರು. ಅಲ್ಲಾವುದ್ದೀನ್ ಹಸನ್‌ಗಂಗು ಬಹುಮನ್ ಶಾಹ ಎಂಬ ಮಹಾಯೋಧನಿಂದ ಪ್ರಾರಂಭವಾದ ಈ ಸಂಸ್ಥಾನವು ಕರ್ನಾಟಕವನ್ನಾಳಿದ ಪ್ರಮುಖರಾಜ ಮನೆತನಗಳಲ್ಲಿ ಒಂದಾಗಿದೆ. ಕೆಲವು ಕಾಲ ಕಲಬುರ್ಗಿ ನಂತರ ಬೀದರ ನಗರಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು."[೧೦] ಬಹುಮನಿ ರಾಜದವರು ಮುಸ್ಲಿಂ ಧರ್ಮದವರಾಗಿದ್ದರಿಂದ ಇಂದಿಗೂ ಈ ಜಿಲ್ಲೆಯಲ್ಲಿ ಮುಸ್ಲಿಂ ಧರ್ಮಿಯರ ಸಂಖ್ಯೆ ಅಧಿಕವಾಗಿದೆ. ಬಹುಮನಿ ವಂಶದ ಅರಸರು ಕರ್ನಾಟಕ ರಾಜಕೀಯದಲ್ಲಿ ಮಹತ್ವದ ಪಾತ್ರವನ್ನು ವಹಿಸಿ ಶಿಲ್ಪಕಲೆ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಕೊಡುಗೆಗಳನ್ನು ನೀಡಿ ತಮ್ಮ ವೈಭವವನ್ನು ಮೆರೆದಿದ್ದಾರೆ. ಬೀದರ ಜಿಲ್ಲೆಯು ಮಹಮದ್ ಗವಾನ್ ಎಂಬ ದಕ್ಷ ಪ್ರಧಾನ ಮಂತ್ರಿಯ ಸೇವೆಯನ್ನು ಪಡೆದು ತನ್ನ ರಾಜಕೀಯ ಪ್ರತಿಷ್ಠೆಯನ್ನು ಹೆಚ್ಚಿಸಿಕೊಂಡಿತಲ್ಲದೆ ಇತರ ಸಾಂಸ್ಕೃತಿಕ ಕ್ಷೇತ್ರದಲ್ಲಿ ಪ್ರಗತಿಯನ್ನು ಸಾಧಿಸಿತು.

ಬೀದರನಲ್ಲಿ ಮದರಸಾ–ಎ–ಮಹಮೂದ್ ಗವಾನ್ ಎಂಬ ವಿಶ್ವವಿದ್ಯಾಲಯ ಗವಾನನು ಸ್ಥಾಪಿಸಿದನು. ಇಲ್ಲಿ ಬೀದರ ಕೋಟೆ, ನರಸಿಂಹ ಘರಿ, ಪಾಪನಾಶ ಮಂದಿರ, ಗುರುನಾನಕ ದ್ವಾರ, ಬರಿದ್ ಶಾಹಿ ಉದ್ಯಾನ, ಮನ್ನಾಎಖ್ಖೇಳಿ ಬುದ್ಧ ವಿಹಾರ, ಹುಮಾನಾಬಾದಿನ ಮಾಣಿಕ ಪ್ರಭು ದೇವಾಸ್ಥಾನಗಳು ಪ್ರೇಕ್ಷಣಿಯ ಸ್ಥಳಗಳಾಗಿವೆ. ಇಲ್ಲಿನ ಆಡುಭಾಷೆಯಲ್ಲಿ ಮರಾಠಿ, ತೆಲುಗಿನ ಮತ್ತು ಉರ್ದುವಿನ ಪ್ರಭಾವವಾಗಿದೆ. ಇಲ್ಲಿನ ಕನ್ನಡ ಭಾಷೆಯು ತೆಲುಗು, ಮರಾಠಿ, ಉರ್ದುವಿನ ಭಾಷೆಗಳ

---

೭. ಡಾ.ಡಿ.ಲಿಂಗಯ್ಯ (ಲೇ) ಜಾನಪದ : ಸ್ವರೂಪ ಮತ್ತು ಸಾಹಿತ್ಯ ಪು.೫, ಪ್ರವ.೨೦೦೬

೮. ಅದೇ ಪು.೫

೯. ಗುರು ಚನ್ನಬಸಪ್ಪ (ಸಂ) ಜಾನಪದ ದರ್ಶನ ಪು.ನಿ.ಕನ್ನಡ ಸಾಹಿತ್ಯ ಪರಿಷತ್ತು.

೧೦. ಪ್ರೊ.ಬಿ.ಪಿ. ಹೂಗಾರ (ಲೇ) ಕರ್ನಾಟಕ ಇತಿಹಾಸ ಪು.೨೬೯, ಪ್ರ.೨೦೦೨

ತ್ರಿಭಾಷಾ ಸಂಗಮವಾಗಿದೆ. 'ಬಿದ್ರಿ' ಕಲೆಯು ಇಲ್ಲಿನ ವಿಶೇಷವಾಗಿದೆ. ಈ ಕಲೆಯ ಸೂಕ್ಷ್ಮ ಕುಸುರಿಯು ಸುಂದರತೆಯನ್ನು ಹೆಚ್ಚಿಸುತ್ತದೆ. ಕರ್ನಾಟಕದಲ್ಲಿ ಮತ್ತೆ ಎಲ್ಲೂ ಕಾಣಸಿಗದ ವಿಶಿಷ್ಟ ಕಲೆಯೆಂದರೆ ಅತಿಶಯೋಕ್ತಿಯಾಗಲಾರದು. ಇಲ್ಲಿ ಕೆಂಪು ಮಣ್ಣು, ಉಷ್ಣ ಹವಾಮಾನವನ್ನು ಹೊಂದಿದೆ. ಬೀದರ ಜಿಲ್ಲೆಯು ಗ್ರಾಮೀಣ ಜಾನಪದರ ಹಾಡುಗಳ ಮೇಲೆ ಚಾರಿತ್ರಿಕ ಹಿನ್ನೆಲೆಯ ಪರಿಣಾಮ ಬೀರಿದೆ.

## ➢ ಬೀದರ ಜಿಲ್ಲೆಯ ದಲಿತರ ಸ್ಥಿತಿಗತಿ :

ಹೈದ್ರಾಬಾದ ಕರ್ನಾಟಕ ಭಾಗವು ಹಿಂದುಳಿದ ಜಿಲ್ಲೆಗಳಿಂದ ಕೂಡಿದೆ. ಆದರೂ ಈ ಭಾಗದ ಜಿಲ್ಲೆಯಾದ ಬೀದರ, ಭಕ್ತಿ ಅಭಿವ್ಯಕ್ತಿಯಲ್ಲಿ ಹಿಂದುಳಿಯಲಿಲ್ಲವೆಂದರೆ ತಪ್ಪಾಗಲಾರದು. ಕಾರಣ ವಿಶ್ವಗುರು ಬಸವಣ್ಣನವರ ಕಾರ್ಯ ಕ್ಷೇತ್ರವಾದ ಬಸವ ಕಲ್ಯಾಣವು ಅಲ್ಲಿನ ಅನುಭವ ಮಂಟಪವು ಬೀದರ ಜಿಲ್ಲೆಯಲ್ಲಿದೆ. ಅನುಭವ ಮಂಟಪವು ಆಗಿನ ಕಾಲದ ಚರ್ಚೆಯ ವಿಚಾರ ವಿನಿಮಯ ಮಾಡಿಕೊಳ್ಳುವ ಆಧ್ಯಾತ್ಮಿಕ ಕೇಂದ್ರವಾಗಿತ್ತು. ಹಾಗೆ ಈ ಜಿಲ್ಲೆಯನ್ನು ಪೂರ್ತಿ ಅವಲೋಕಿಸಿದಾಗ ಧರ್ಮಕ್ಷೇತ್ರ, ದೇವಸ್ಥಾನ, ಮಠಗಳ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ.

ಕಾಲಾಂತರದಲ್ಲಿ ಈ ಭಾಗದ ದಲಿತರು ಬಾಬಾ ಸಾಹೇಬರನ್ನು ಆರಾಧಿಸುತ್ತಾ, ಭಕ್ತಿಯಿಂದ ಹಾಡುತ್ತಾ ಭೀಮರನ್ನು ಜೀವಂತ ಮೂರ್ತಿಯಾಗಿ ಕಾಣುತ್ತಾರೆ. ದಲಿತರು ತಮ್ಮ ಹಕ್ಕು ಮೀಸಲಾತಿಯನ್ನು ತಿಳಿದುಕೊಂಡು, ಇತರ ದಲಿತರಿಗೂ ಜಾಗೃತಿ ಮೂಡಿಸುತ್ತಿದ್ದಾರೆ. ಇಂದು ಈ ಜಿಲ್ಲೆಯ ದಲಿತರು ಗ್ರಾಮೀಣ ವೃತ್ತಿ ಕೃಷಿಗೆ ಅವಲಂಬಿಸಿದ್ದಾರೆ ಕೆಲವರು ನಗರಕ್ಕೆ ವೃತ್ತಿ ಹಾಗೂ ಶಿಕ್ಷಣಕ್ಕಾಗಿ ವಲಸೆ ಹೋಗುತ್ತಿದ್ದಾರೆ. ಆಧುನಿಕ ಬದುಕನ್ನು ಅವಲಂಬಿತವಾಗಿರುವ ದಲಿತರು ಶಿಕ್ಷಣ ಪಡೆದು ಉನ್ನತ ವೃತ್ತಿಯಲ್ಲಿದ್ದಾರೆ. ಪೂರ್ವದ ಸ್ಥಿತಿಗಿಂತಲೂ ಇಂದು ಅವರು ಅಭಿವೃದ್ಧಿ ಹೊಂದಿ ಸುಧಾರಿಸಿಕೊಂಡಿದ್ದಾರೆ.

ಹಿಂದೂ ಧರ್ಮದ ಪೂಜೆ ಪುನಸ್ಕಾರಗಳನ್ನು ಸಂಪೂರ್ಣವಾಗಿ ತ್ಯಜಿಸದಿದರೂ ಬುದ್ಧ-ಭೀಮರ ತತ್ವ ಪ್ರಭಾವಿತರಾಗಿ ಅವರನ್ನೆ ಪೂಜಿಸುತ್ತಿದ್ದಾರೆ. ಇಂದು ಬೀದರ ಜಿಲ್ಲೆಯ ಪ್ರತಿಯೊಂದು ದಲಿತ ಮನೆಗಳಲ್ಲಿ ಬುದ್ಧ-ಭೀಮರ ಫೋಟುಗಳಿವೆ. ದಲಿತರಲ್ಲಿ ಯಾವುದನ್ನು ಸ್ವೀಕರಿಸಬೇಕು ಮತ್ತೆ ಯಾವುದನ್ನು ತಿರಸ್ಕರಿಸಬೇಕೆಂಬ ವೈಚಾರಿಕ ಪ್ರಜ್ಞೆ ಅವರಲ್ಲಿ ಬೆಳೆಯತೊಡಗಿದೆ. ಇಂದು ಈ ಜಿಲ್ಲೆಯ ಹಲವಾರು ಗರಾಮಗಳಲ್ಲಿ ಭಜನೆ ಸಂಘಗಳಿವೆ. ತಮ್ಮ ಸಂಪ್ರದಾಯಿಕ ಆಚರಣೆಗಳಲ್ಲೂ ಬೌದ್ಧ ಧರ್ಮವನ್ನೇ ಅವಲಂಭಿಸಿ ಆಚರಿಸುತ್ತಿದ್ದಾರೆ. ಉದಾ : ತೊಟ್ಟಿಲು, ಮದುವೆ, ಪುಣ್ಯತಿಥಿ ಯಂತಹ ಯಾವುದೇ ಸುಖ ದುಃಖ ಕಾರ್ಯಕ್ರಮವನ್ನು ಆರಂಭಿಸುವ ಮೊದಲು ಬುದ್ಧಪ್ರಾರ್ಥನೆಯನ್ನು ಭಕ್ತಿಯಿಂದ ಹಾಡುತ್ತಾರೆ. ಈ ಭಜನ ಸಂಘಗಳೇ ರಾಜಕೀಯ ಸಂಘಗಳಾಗಿವೆ.

## ➢ ಕ್ಷೇತ್ರಕಾರ್ಯ :

ನಾನು ಮೊಟ್ಟ ಮೊದಲ ಸಲ ಕ್ಷೇತ್ರಕಾರ್ಯಕ್ಕಾಗಿ ಅಂಬೇಡ್ಕರ ಹಾಡುಗಳನ್ನು ಸಂಗ್ರಹಿಸಲು ಆರಂಭಿಸಿದಾಗ ಮನದಲ್ಲಿ ಕುತೂಹಲ, ದುಗುಡ, ಭಯ, ಆಸಕ್ತಿ ಭಾವನೆಗಳು ಒಳಗೊಂಡಿದ್ದವು. ಹಾಡುಗಳನ್ನು ಸಂಗ್ರಹಿಸುವ ಕುತೂಹಲ ಒಂದು ಕಡೆ ಇದ್ದರೆ, ಮತ್ತೊಂದು ಕಡೆ ಹಳ್ಳಿಯ ಜನ ನನ್ನೊಂದಿಗೆ ಯಾವ ರೀತಿ ವರ್ತಿಸುತ್ತಾರೆಂಬ ಭಯ ಇತ್ತು. ನಾನು ಬೀದರ ಜಿಲ್ಲೆಯ ಸುತ್ತಮುತ್ತಲಿರುವ ಗ್ರಾಮಗಳನ್ನು ಅವಲೋಕಿಸಿದಾಗ ಅಲ್ಲಿ ಒಂದು ಸೊಗಸಾದ ಭಕ್ತಿ ಜಗತ್ತನ್ನು ಕಂಡೆ, ಗ್ರಾಮಗಳು ಅಲ್ಲದೆ ಬೀದರ ನಗರದ ವಿವಿಧ ಉಪ ನಗರಗಳಲ್ಲಿ ಭಜನೆ ಮೇಳ ಮತ್ತು ಬುದ್ಧ ವಿಹಾರವನ್ನು ಕಂಡುಕೊಂಡೆನು.

ಉದಾ :

"ಜೈಭೀಮ ಭಜನೆ ಮೇಳ"

"ಭೀಮ ನಗರ ಭಜನ ಸಂಘ"

"ಆನಂದ ನಗರದ ಬುದ್ಧ ವಿಹಾರ" ಇತ್ಯಾದಿ

ಜಾನಪದ ಕ್ಷೇತ್ರಕಾರ್ಯದಲ್ಲಿ ಸಂಗ್ರಹಕಾರ್ಯ ಬಹಳ ಮುಖ್ಯ. ಏಕೆಂದರೆ ಜಾನಪದ ಮೂಲತಃ ಒಂದು ಮೌಖಿಕ ಪ್ರಕಾರವಾಗಿದೆ. ಆದ ಕಾರಣ. ಸಂಗ್ರಹ ಕಾರ್ಯದಲ್ಲಿ ಜಾಗೃತಿಯಿಂದರಬೇಕಾಗುತ್ತದೆ. ಇಲ್ಲಿ ಸಂಗ್ರಹಣೆಯೇ ಮೊದಲಿನದು. ಕ್ಷೇತ್ರಕಾಯರ್ಕಕ್ಕೆ ಕೆಲವೊಂದು ಪೂರ್ವಸಿದ್ಧತೆಗಳು ಅಗತ್ಯವಾಗಿರುತ್ತವೆ. ಜಾನಪದವನ್ನು ಅಭ್ಯಾಸಮಾಡುವ ಪ್ರತಿಯೊಬ್ಬರೂ ಕ್ಷೇತ್ರಕಾರ್ಯದ ತಂತ್ರಗಳನ್ನು ತತ್ತ್ವಗಳನ್ನು ಅರಿತಿರಬೇಕು ಎಂದು ಹೇಳುತ್ತಾರೆ.

ಗ್ರಾಮಗಳಿಗೆ ನಾನು ಸಂದರ್ಶಿಸಿದಾಗ ಎಲ್ಲರೂ ನನ್ನೊಂದಿಗೆ ಆತ್ಮೀಯವಾಗಿ ವರ್ತಿಸಿದ್ದನ್ನು ನಾನು ಎಂದಿಗೂ ಮರೆಯುವುದಿಲ್ಲ. ಅವರ ಈ ಕಾಳಜಿಯಲ್ಲಿ ನನಗೆ ಭೀಮರ ಕುರಿತು ಭಜನೆ ಭಕ್ತಿಯು ಕಾಣಿಸಿತು. ಸಂಘ ವಿಹಾರಗಳನ್ನು ಸುಂದರವಾಗಿ ಕಟ್ಟಿರುವುದನ್ನು ಕಂಡರೆ ಬುದ್ಧ ಭೀಮರ ಬಗ್ಗೆ ಅವರಿಗೆ ಇರುವ ಅಭಿಮಾನ ಎದ್ದು ಕಾಣುತ್ತದೆ. ಹಾಡುಗಳ ಗಾಯಕರು ಬುಧವಾರ ಹಾಗೂ ಹುಣ್ಣಿಮೆ ದಿವಸ ಹಾಡುತ್ತಾರೆ, ಆದರೆ ನಾನು ಒಂದು ಸಲ ಸೋಮವಾರ ದಿನಾಂಕ ೨೪/೮/೦೯ರಂದು ಬೀದರ ಜಿಲ್ಲೆಯ ಧನ್ನೂರ ಗ್ರಾಮಕ್ಕೆ ಸಂಗ್ರಹಕ್ಕಾಗಿ ಹೋದಾಗ, ಅಲ್ಲಿನ ಗಾಯಕಿಯರು ತಮ್ಮ ಕೆಲಸಕಾರ್ಯಗಳನ್ನು ಬಿಟ್ಟು, ಬೇಸರ ಪಡದೆ ಹಾಡುಗಳನ್ನು ರಾಗ ಬದ್ಧವಾಗಿ ಹಾಡಿ ನನಗೆ ಸಹಕಾರ ಮಾಡಿದರು.

**"ಜಾನಪದದಲ್ಲಿ ಬಾಬಾಸಾಹೇಬರ ಲೌಕಿಕ ಬದುಕು" :**

ಜಾನಪದರಲ್ಲಿ ಬಾಬಾ ಭೀಮ ಸಾಹೇಬರ ಕುರಿತು ಹಾಡುಗಳು ಅವರ ಕಾಲದಿಂದಲೇ ಹುಟ್ಟಿ ನಂತರ ವಿಕಾಸಗೊಂಡವು ಎಂದು ಹೇಳಬಹುದು. ಆದರೆ ಇಂದು ಹೊಸ-ಹೊಸ ಹಾಡುಗಳು ದಿನಕಳೆದಂತೆ ರಚನೆಗೊಳ್ಳುತ್ತಲೇ ಇರುವುದು ವಿಶೇಷ ಸಂಗತಿಯಾಗಿದೆ. ಇಂದಿನ ಆಧುನಿಕ ಯುಗದಲ್ಲೂ ಸಮೂಹ ಮಾಧ್ಯಮಕ್ಕೆ ಅಂಟಿಕೊಂಡೇ ಭಜನೆ ಹಾಡುಗಳನ್ನು ಪ್ರಚಾರಗೊಳಿಸಲಾಗುತ್ತಿದೆ.

ಸಿನಿಮಾ ಹಾಡುಗಳ ದಾಟಿಯಲ್ಲಿ ಅಂಬೇಡ್ಕರ ಹಾಡುಗಳನ್ನು ಹಾಡುತ್ತಾರೆ. ಏಕೆಂದರೆ ಈ ತೆರನ ಧಾಟಿಗಳು ಜನಪದ ಕೈಗೆ ಸುಲಭವಾಗಿ ದೊರೆಯುತ್ತವೆ. ಶುದ್ಧ ಶಾಸ್ತ್ರೀಯ ಸಂಗೀತದ ಅಧ್ಯಯನದ ಅವಕಾಶವಿಲ್ಲದಿರುವ ಸಂದರ್ಭದಲ್ಲಿ ಜನಪದರು ತಮ್ಮ ಕೈಗೆ ದೊರೆತ ಮಾಧ್ಯಮಗಳನ್ನು ಅನುಕರಿಸಿ, ಅನುಸರಿಸುವ ಮೂಲಕ ತಮ್ಮದೇ ಶೈಲಿಯೊಂದನ್ನು ನಿರ್ಮಿಸಿಕೊಳ್ಳುತ್ತಾರೆ. ಒಂದಾನೊಂದು ಕಾಲದಲ್ಲಿ ಅಂದರೆ ಈಗಿನಂತೆ ಸಮೂಹ ಮಾಧ್ಯಮಗಳು ಲಭ್ಯವಿಲ್ಲದಿದ್ದ ಮತ್ತು ಶಿಷ್ಟ ಮಟ್ಟುಗಳ ಕಲಿಕೆಗೆ ಅವಕಾಶವಿಲ್ಲದ ಕಾಲದಲ್ಲಿ ಜನಪದರು ತಮ್ಮ ಸುತ್ತಲಿನ ಪರಿಸರ, ನಿಸರ್ಗದಿಂದಲೇ ಸಂಗೀತದ ನಾದ ಮಾಧ್ಯರ್ಯಗಳನ್ನು ತಮ್ಮ ದನಿಗೆ ಒಗ್ಗಿಸಿಕೊಂಡದಿತ್ತು. ಕೋಗಿಲೆ, ಗಿಳಿ, ಗೊರವಂಕ, ಬಿದಿರಿನ ಕೊಳಲು, ಡೋಲು, ಡಪ್ಪು, ದಮಡಿ, ಚಯಮ್ಮ ಇತ್ಯಾದಿ ಪರಿಕರಗಳ ಮೂಲಕ ತಮ್ಮ ದನಿಗೆ ಶೃತಿ ಸೋಬತಿಯನ್ನು ಪಡೆಯುತ್ತಿರಲು ಸಾಕು ಆದರೆ ಇಂದು ತಂತ್ರಜ್ಞಾನ, ವಿದ್ಯುನ್ಮಾನ ಮಾಧ್ಯಮಗಳು ಎಲ್ಲೆಂದರಲ್ಲಿ ಸುಲಭವಾಗಿ ಪ್ರಚಾರ, ಪ್ರಸಾರ ಗೊಳ್ಳುತ್ತಿರುವ ಕಾಲದಲ್ಲಿ ಸಹಜವಾಗಿಯೇ ಜನಪದರು ಅವನ್ನು ತಮ್ಮ ಹಾಡುಗಾರಿಕೆಗೆ ಒಗ್ಗಿಸಿಕೊಂಡು ಬಗ್ಗಿಸಿಕೊಂಡು ತಮ್ಮ ಶೃತಿ ಸೋಬತಿಗೆ ದಕ್ಕಿಸಿಕೊಳ್ಳುತ್ತಾರೆ. ಅವರ ಬಾಯಲ್ಲಿ ಸಿನೇಮಾಗಳ ಧಾಟಿಗಳ ಜಾನಪದೀಯ ಸ್ವಚ್ಚಂದ ಧ್ವನಿಕಾರರ ಸ್ಪರ್ಶ ಪಡೆದುಕೊಂಡು "ಸಿನಿಮಾ ಜಾನಪದ" ವೆಂಬ ಹೊಸ ಆಯಾಮ ಪಡೆದುಕೊಳ್ಳುತ್ತದೆ.

ಇಂದು ಜನರನ್ನು ಪ್ರಬಲವಾಗಿ ಆಕರ್ಷಿಸುವ ಮಾಧ್ಯಮವೆಂದರೆ ಸಿನಿಮಾ ಆಗಿದೆ. ಜನರ ಮೇಲೆ ಬೀರುವ ಪ್ರಭಾವ ಅರಿತು ಜನಪದರು ಹೊಸ ರೀತಿಯ ಹಾಡುಗಳನ್ನು ರಚಿಸುತ್ತಾರೆ.

ಜಾನಪದಿಯರು ಬಾಬಾ ಸಾಹೇಬರ ಹುಟ್ಟು ಕಂಡಿದ್ದು ಸಾಂಪ್ರದಾಯಿಕ ಹಾಡುಗಳಾದ ತೊಟ್ಟಿಲ ಹಾಡುಗಳಲ್ಲಿ ಕಾಣಬಹುದು.

"ಜೋ ಲಾಲಿ ಜೋ ರಾಮಜೀ
ಭೀಮಬಾಯಿಗೆ ಹದಿನಾಲ್ಕನೇ ಮಗನಾಗಿ . . . ." [೧೧]

ಈ ತೊಟ್ಟಿಲ ಹಾಡಿನಲ್ಲಿ ಭೀಮರು ಹುಟ್ಟಿ ಅಂಬೆವಾಡಿಗೆ ಮಾತ್ರವಲ್ಲದೆ ಇಡೀ ದಿನ ದಲಿತರ ಪಾಲಿಗೆ ಬೆಳಕಾಗಿ ಜನಿಸಿದರು. ಜಾನಪದ ದಲಿತರು ತಮ್ಮ ಮಕ್ಕಳ ತೊಟ್ಟಿಲು ಕಾರ್ಯಕ್ರಮದಲ್ಲಿನ ಹಾಡುಗಳಲ್ಲಿ ಬಾಬಾ ಭೀಮರಂತೆ ನಮ್ಮ ಮಕ್ಕಳು ಆಗಲಿ ಇಲ್ಲವಾದರೆ ಬಾಬಾ ಭೀಮರ ಆಶೀರ್ವಾದ ಕರುಣೆಯಲ್ಲಿ ಅವನ ಭವಿಷ್ಯ ಬೆಳಗಲಿ ಎಂದು ಆಶಿಸುತ್ತಾರೆ.

ಈ ಜಾನಪದ ಹಾಡುಗಳಲ್ಲಿ ಬಾಬಾ ಭೀಮರ ಲೌಕಿಕ ಬದುಕು ಕಾಣಬಹುದು.

"ನಿನ್ನ ದೇಹ ವಜ್ರ ಅವುತಾರ ಪುರುಷ
ಹನ್ನೊಂದನೆ ಅವುತಾರ ಬಂದಿ ಭೀಮ
ಭಾರತ ಹಣೆಬಾರ ಬರೆದು ಭವಿಷ್ಯ
ಮಾನವ ರೂಪ ತೊಟ್ಟ ಬಾಲು ವೇಷ ॥ಬಾಬಾ ಬಂದು॥ [೧೨]

ಭೀಮರು ಸಂವಿಧಾನ ಬರೆದು ನಮಗೆ ಹಕ್ಕು ನೀಡಿ ನಮ್ಮೆಲ್ಲರನ್ನೂ ಒಂದು ಮಾಡಿದರು. ಬ್ರಹ್ಮನಾಗಿ ಹುಟ್ಟಿ ಭೂಮಿ ಮೇಲೆ ಸೂರ್ಯ–ಚಂದ್ರರ ಛಾಯೆ ಬಿದ್ದಂತೆ ನಿಮ್ಮ ಛಾಯೆ ದಲಿತರ ಜೀವನ ಮೇಲೆ ಮೂಡಿದೆ. ಇವರ ದೇಹ ವಜ್ರದ ಹಾಗೆ ಹೊಳಪುಳ್ಳದು. ಹನ್ನೊಂದನೆ ಅವತಾರ ಪುರುಷರಾಗಿ ಬಂದು ಭಾರತದ ಭವಿಷ್ಯ ಹಣೆಬಾರ ಬರೆದರು. ಹನ್ನೊಂದನೆ ಅವತಾರ ಎಂಬುದಾಗಿ ಅವರು ಬಳಸುವಾಗ ಹಿಂದೂ ಮಿಥಾಲಜಿಯೊಂದಿಗೆ ಜೋಡಿಸಿಕೊಳ್ಳುವ ಹಂಬಲ ಕಾಣಿಸುತ್ತದೆ. ವೈದಿಕ ಪುರಾಣಗಳ ಪ್ರಕಾರ ಶ್ರೀಮನ್ನಾರಾಯಣನಿಗೆ ಹತ್ತು ಅವತಾರಗಳು ಇವೆ. ಎಷ್ಟು ಹತ್ತು ಅವತಾರ ತೊಟ್ಟು ಜಗವನ್ನು ಉದ್ಧರಿಸಿರಬಹುದಾದರೆ ಬಾಬಾ ಸಾಹೇಬರು ಅದರ ಮುಂದುವರೆದ ಭಾಗವಾಗಿ ಹನ್ನೊಂದನೆ ಅವತಾರ ತೊಟ್ಟು ದಲಿತ ಲೋಕವನ್ನು ಉದ್ಭವಿಸಿದರು ಎಂಬುದು ಇವರ ನಂಬಿಕೆ, ವೈದಿಕ ಮಿಥಾಲಜಿಯನ್ನು ಬಡಿದಿರುವ ಬಾಬಾಸಾಹೇಬರನ್ನು ವೈದಿಕ ಪೌರಾಣಿಕತೆಯೊಂದಿಗೆ ಗುರುತಿಸುವ ವೈರುಧ್ಯ ಇಲ್ಲಿ ಕಂಡು ಬರುತ್ತದೆ. ಜಾನಪದರಿಗೆ ಪಡೆಯುವದರಕ್ಕಿಂತ ಕಟ್ಟುವುದರಲ್ಲಿಯೇ ಆಸಕ್ತಿ ಉಂಟು.

ಮಾನವ ರೂಪ ತೊಟ್ಟು ಭೀಮರು ಜ್ಞಾನ ಭಂಡಾರದ ಬೆಳಕು ಹರಡಿಸಿದ್ದಾರೆಂದು ಭೀಮರ ಸಾಧನೆ ವ್ಯಕ್ತವಾಗಿದೆ.

"ಬಾರಮ್ಮ ರಮಾ ಬಾರಮ್ಮಾ
ಬಲಗಾಲಿಟ್ಟು ಬಾರಮ್ಮಾ ॥ಪ॥

ನಿನ್ನ ಕಣ್ಣಲ್ಲಿ ಪ್ರೀತಿ ಕರುಣೆ ತುಂಬಿ
ಭಿಮನಿಗೆ ಸತಿಯಾಗಿ ಬಾರಮ್ಮಾ
ನಿನ್ನ ಮನದಲ್ಲಿ ಪ್ರೇಮ ಮಮತೆ ತುಂಬಿ
ಸಕ್ಕಾಲ ಮನೆತನ ಬೆಳಗಮ್ಮಾ ॥ಬಾರಮ್ಮಾ ರಮಾ॥ [೧೩]

---

೧೧. ಧ್ವನಿ ಸುರುಳಿ ಸಂಗ್ರಹ.
೧೨. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು, ಪು.೨೨
೧೩. ಧ್ವನಿ ಸುರುಳಿ ಸಂಗ್ರಹ.

ಭೀಮರ ದಾಂಪತ್ಯ ಬದುಕನ್ನು ಕುರಿತು ರಮಾಬಾಯಿ ಭೀಮನಿಗೆ ಸತಿಯಾಗಿ ಬಾರಮ್ಮಾ ಎಂದು ಇದು ಭೀಮ ರಮಾಬಾಯಿ ಮದುವೆ ಸಂದರ್ಭದ ಹಾಡಾಗಿದೆ. ರಮಾಬಾಯಿ ಬಲಗಾಲಿಟ್ಟು ಕಣ್ಣಲ್ಲಿ ಪ್ರೀತಿ, ಕರುಣೆ ತುಂಬಿ, ಸಕ್ಕಾಲ ಮನೆತನವನ್ನು ಪ್ರೇಮದಿಂದ ಬೆಳಗಮ್ಮಾ ಎಂದು ಇವರ ದಾಂಪತ್ಯ ಬದುಕನ್ನು ಕುರಿತು ಆಶಿಸಲಾಗಿದೆ.

**"ಬಾಬಾ ಭೀಮ ಸಾಹೇಬರು ಅನುಭವಿಸಿದ ನೋವು-ಬವಣೆ"**

ಭೀಮ ಸಾಹೇಬರು ಬಾಲ್ಯದಿಂದಲೇ ಬಡತನದ ಕಷ್ಟ, ಅವಮಾನದ ನೋವನ್ನು ಅನುಭವಿಸಬೇಕಾಯಿತು. ಅವರಿಗೆ ಅಸ್ಪೃಶ್ಯತೆಯ ಶೋಷನೆ ಚಾಟಿ ಏಟಿನಂತೆ ಬರೆ ಬೀರಿತು. ಅವರ ಬಾಲ್ಯ ಹಸಿವು ಮತ್ತು ಬಡತನಗಳ ವ್ಯಥೆಯಷ್ಟೇ ಆಗಿದ್ದರೆ ಯಾರ ಅರಿವಿಗೂ ಬರುತ್ತಿರಲಿಲ್ಲ, ಆ ನೋವಿನ ಹಿಂಸೆಯನ್ನು ಎದುರಿಸಿದ ದಲಿತ ಸೂರ್ಯ, ಭಿಮರು ಅಸ್ಪೃಶ್ಯತೆಯ ಮತ್ತುಜಾತಿ ದಮನದ ನಿರ್ಮೂಲನವನ್ನು ಪ್ರತಿಪಾದಿಸಿದವರಲ್ಲಿ ಅಗ್ರಗಣ್ಯರು. ಬುದ್ಧನನ್ನು ಅರಿತ ಅಂಬೇಡ್ಕರ ಹಸಿವಿನಿಂದ ಅವಮಾನದಿಂದ ರೊಚ್ಚಿಗೇಳಲು ಸಿದ್ಧವಾಗಿದ್ದ ಸಮುದಾಯವೊಂದಕ್ಕೆ ಪ್ರಜಾತಾಂತ್ರಿಕ ಮೌಲ್ಯವೆಂಬ ಅಹಿಂಸಾತ್ಮಕ ಆಯುದ್ಧವೊಂದನ್ನು ನೀಡಿ ಶಾಂತಿಯನ್ನು ಮೂಡಿಸಿದರು. ಆದ್ದರಿಂದಲೇ ಅವರು ಪ್ರಜಾಪ್ರಭುತ್ವದ ಅಡಿಗಲ್ಲುಗಳಾದ ಸಮಾನತೆ, ಸ್ವಾತಂತ್ರ್ಯ ಮತ್ತು ಭ್ರಾತೃತ್ವಗಳನ್ನು ಬುದ್ಧನಿಂದ ಪಡೆದುಕೊಂಡಿದ್ದಾರೆ.

"ಡಾ. ಅಂಬೇಡ್ಕರ ಆಶಯವೂ ಸಹ ನಾನು ತಂದು ನಿಲ್ಲಿಸಿದ ಪ್ರಗತಿ ರಥವನ್ನು ಮುಂದಕ್ಕೆಳೆಯಿರಿ, ಆಗದಿದ್ದರೆ ಅಲ್ಲೆ ನಿಲ್ಲಿಸಿಬಿಡಿ, ಆದರೆ ಯಾವುದೇ ಕಾರಣಕ್ಕೂ ಹಿಂದಕ್ಕೆಳೆಯಬೇಡಿ ಎಂಬುದಾಗಿತ್ತು." [೧೪]

"ಬಾಲ್ಯದಲ್ಲಿರುವಾಗ ಒಮ್ಮೆ ಬಾಬಾ ಸಾಹೇಬರ ಜೀವನದಲ್ಲಿ ನಡೆದ ಘಟನೆ ಅವರಿಗೆ ಬದುಕಿನಲ್ಲಿ ತುಂಬಾ ನೋವುಂಟು ಮಡಿತು. "ಒಮ್ಮೆ ಅವರು ತಮ್ಮ ತಂದೆಯನ್ನು ನೋಡಲು ಗೋರೆಗಾಂವೆಗೆ ಹೋದಾಗ ಅಲ್ಲಿನ ರೈಲ್ವೆ ನಿಲ್ದಾಣದಲ್ಲಿ ಯಾರು ಕರೆದೊಯ್ಯಲು ಬರುವುದಿಲ್ಲ ಕಾರಣ ಅವರು ತಂದೆಯವರಿಗೆ ಮಕ್ಕಳು ಬರುವ ಸುದ್ಧಿ ಮುಟ್ಟಿರುವುದಿಲ್ಲ ನಿರ್ವಾಹವಿಲ್ಲದೆ ಸ್ಟೇಷನ್ ಮಾಸ್ತರರ ಬಳಿ ಸಹಾಯಕ್ಕಾಗಿ ಯಾಚಿಸುತ್ತಾರೆ. ಆದರೆ ಹಿಂದೂಗಳಲ್ಲಿನ ರೂಢಿಯಂತೆ ಆತ ಮೊದಲು ಕೇಳುವುದು ನೀವು ಯಾವ ಜಾತಿ ಎಂದು ಈ ಮಕ್ಕಳು ಮುಗ್ಧರಾಗಿ 'ಮಹಾರರು' ಎಂದು ಹೇಳುತ್ತಾರೆ. ಸ್ಟೇಷನ್ ಮಾಸ್ತರ್ ಎರಡು ಹೆಜ್ಜೆ ಹಿಂದೆ ಚಲಿಸುತ್ತಾನೆ. ಈ ಘಟನೆ ಒಬ್ಬ ವ್ಯಕ್ತಿಯ ಮನ ಸ್ಥಿತಿಯನ್ನು ಮಾತ್ರ ಹೇಳುತ್ತಿಲ್ಲ, ಒಂದು ಧರ್ಮದ ಸ್ಥಿತಿಯನ್ನು ಹೇಳುತ್ತಿದೆ. ಕೊನೆಗೂ ಮಾಸೂರಿಗೆ ತೆರಳಲು ಒಂದು ಗಾಡಿ ಲಭಿಸುತ್ತದೆ. ಆದರೆ ಗಾಡಿಯವನು ಹೊಲೆಯರ ಹುಡುಗರನ್ನು ಕೂರಿಸಿಕೊಂಡು ಗಾಡಿ ನಡೆಸಲು ಒಪ್ಪುವುದಿಲ್ಲ. ಗಾಡಿಯ ಹಿಂದೆ ನಡೆದು ಬರುತ್ತಾನೆ. ಅಂಬೇಡ್ಕರರ ಅಣ್ಣ ಗಾಡಿ ನಡೆಸುತ್ತಾನೆ. ಪ್ರೌಢನೊಬ್ಬ ಮಕ್ಕಳನ್ನು ನಡೆಸಿಕೊಳ್ಳುತ್ತಿರುವ ರೀತಿಯನ್ನು ಒಂದು ಧರ್ಮ ನಿರ್ದೇಶಿಸುತ್ತಿದೆ ಎಂಬುದನ್ನು ನಾವಿಲ್ಲಿ ಮನಗಣಬೇಕು. ಧರ್ಮವೇ ಮನುಷ್ಯತ್ವವನ್ನು ನಾಶಮಾಡಿಕೊಂಡಿರುವ ಕ್ರೌರ್ಯವಿದೆ. ಈ ಘಟನೆಯಿಂದ ಭೀಮರಂಥ ಸೂಕ್ಷ್ಮಜ್ಞನೊಬ್ಬ ಎಷ್ಟು ಘಾಸಿಗೊಂಡಿರಬಹುದು ಎಂಬುದನ್ನು ಊಹಿಸಿಕೊಳ್ಳಬಹುದು. ಭೀಮರು ಸತಾರಕ್ಕೆ ಬಂದ ಮೇಲೆ ಇವರಿಗೆ ಕ್ಷೌರ ಮಾಡಲು ಯಾರೂ ಒಪ್ಪುವುದಿಲ್ಲ. ಇದು ಅವರಿಗೆ ದೊಡ್ಡ ಪ್ರಶ್ನೆಯಾಗಿ ಕಾಡುತ್ತದೆ. ಇದೊಂದು ದೊಡ್ಡ ಅವಮಾನವಾಗಿ ಅಂಬೇಡ್ಕರರು ವಿಚಲಿತರಾಗುತ್ತಾರೆ." [೧೫]

---

೧೪. ಡಾ.ಮೂಡ್ನಾಕೂಡು ಚಿನ್ನ ಸ್ವಾಮಿ (ಲೇ) ಸಾಮಾಜಿಕ ಚಳುವಳಿಗಳು ಬುದ್ಧ ಬಸವ ಬಾಬಾ ಸಾಹೇಬ ಪು.೫೩ ಪ.೨೦೦೮.

೧೫. ಅದೇ, ಪು.೫೮

ಅಂಬೇಡ್ಕರರು ಇಂಗ್ಲೆಂಡಿನಿಂದ ಮರಳಿ ಬಂದು ಮಹಾರಾಜರಲ್ಲಿ ನೌಕರಿ ಪಡೆದು ಇರಲು ಯಾರು ಇವರಿಗೆ ಕೊಠಡಿ ಕೊಡುವುದಿಲ್ಲ. ಕಾರಣ ಇವರು ಅಸ್ಪೃಶ್ಯರೆಂದು. ಕೊನೆಗೆ ಪಾರ್ಸಿ ಧರ್ಮಶಾಲೆಯಲ್ಲಿ ರೂಮು ದೊರಕಿತು. ಆದರೆ ಕೆಲವೇ ದಿನಗಳಲ್ಲಿ ಪಾರ್ಸಿ ಜನರಿಗೆ ತಮ್ಮ ಧರ್ಮಶಾಲೆಯಲ್ಲಿ ಒಬ್ಬ ಅಸ್ಪೃಶ್ಯನಿದ್ದಾನೆ ಎಂಬುದು ತಿಳಿದು ಮಚ್ಚುಗಳೊಡನೆ ಬಂದು 'ನೀನು ಯಾವ ಜಾತಿ ಎಂದು ಕೇಳುತ್ತಾರೆ,' ಅಂಬೇಡ್ಕರ ಆಗ ನನಗೆ ಎಂಟು ಗಂಟೆ ಸಮಯ ಕೊಡಿ ಎಂದು ಕೇಳಿಕೊಂಡು ನೌಕರಿಗೆ ರಾಜಿನಾಮೆ ನೀಡಿ ಹೊರಡುತ್ತಾರೆ. ಪಾರಸಿ ಧರ್ಮಿಯರು ಅಸ್ಪೃಶ್ಯತೆ ಆಚರಿಸುವುದನ್ನು ಕಂಡು ಅಚ್ಚರಿಗೊಳ್ಳುತ್ತಾರೆ ಇದರ ಪರಿಣಾಮವಾಗಿ ದಲಿತರ ಹಕ್ಕುಗಳಿಗಾಗಿ ಹೋರಾಟ ನಡೆಸಿದರು.

ಬಾಬಾ ಭೀಮರು ಅನುಭವಿಸಿದ ಅಸ್ಪೃಶ್ಯತೆಯೆಂಬ ನೋವಿನ ಬವಣೆಯನ್ನು ಈ ಹಾಡಲ್ಲಿ ಕಾಣಬಹುದು.

"ಶಾಲೆಯಲ್ಲಿ ಬ್ರಾಹ್ಮಣರೆಲ್ಲ
ಲಿಂಗಾಯತ ಮುಸ್ಲಿಂರೆಲ್ಲ
ಜಾತಿ ಭೇದ ಮಾಡುತರಲ್ಲ" ॥ಕೋಲೆನ್ನ ಕೋಲೆ॥ [೧೬]

ಬಾಬಾ ಸಾಹೇಬರರು ತಾವುಅನುಭವಿಸಿದ
ಅಸ್ಪೃತೆಯ ನೋವನ್ನು ಈ ರೀತಿ ಹೇಳಿ ಕೊಂಡರು
"ಹಿಂದೂವಾಗಿ ಹುಟ್ಟಿದ್ದು ತಮ್ಮ ದುರದೃಷ್ಟವಾಗಿದ್ದರೂ"
ತಾನುಹಿಂದೂವಾಗಿ ಸಾಯುವುದಿಲ್ಲ ॥ ಎಂದು ಸಾರಿದು ॥ [೧೭]

ಮೇಲಿನ ಬುಲಾಯಿ ಹಾಡಿನ ಸಾಲಿನಲ್ಲಿ ಭೀಮರು ಶಾಲೆಯಲ್ಲಿ ಇತರ ಧರ್ಮಗಳಿಂದ ಅನುಭವಿಸಿದ ಅಸ್ಪೃಶ್ಯತೆಯ ನೋವು ಹೃದಯಕ್ಕೆ ತಟ್ಟುತ್ತದೆ. ಈ ಘಟನೆಯಿಂದ ದಲಿತರಿಗೆ ಸಮಾನತೆ ನೀಡಬೇಕೆಂದು ಅವರಲ್ಲಿ ಬಾಲ್ಯದಿಂದಲೇ ಬೇರೂರಿತು. ಕಾರಣ ತಾನು ಅನುಭವಿಸಿದ ನೋವು-ಕಷ್ಟ ಇತರು ಅನುಭವಿಸಬಾರದೆಂಬುದು ಇವರ ನಿಲುವಾಗಿತ್ತು.

## "ಜಾನಪದರಲ್ಲಿ ದಲಿತ ಪ್ರಜ್ಞೆ"

ಸ್ವಾತಂತ್ರ್ಯ ಸಮಾನತೆ ಸೋದರ ತತ್ವಗಳ ತಳಹದಿಯ ಮೇಲೆ ಮಾತ್ರವೇ ಆದರ್ಶ ಸುಸ್ಥಿರ ಸಮಾಜ ನಿರ್ಮಾಣ ಮಾಡಬಹುದು"[೧೮] ಎಂಬ ಬಾಬಾ ಸಾಹೇಬರ ಹೇಳಿಕೆಯು ದಲಿತರ ಸಮಾಜ ನಿರ್ಮಾಣ ಕುರಿತಾಗಿದೆ. ದಲಿತರಿಗೆ ಭೀಮ ಸಾಹೇಬರು ಉದ್ಧಾರ ಮಾರ್ಗವನ್ನು ತೋರಿಸಿಕೊಟ್ಟರು. ಇವರ ಜೀವನ ಮಹತ್ವಾಕಾಂಕ್ಷೆಯೆಂದರೆ ದಲಿತರು ರಾಜಕೀಯ ಅಧಿಕಾರವನ್ನು ಪಡೆದುಕೊಳ್ಳಬೇಕೆನ್ನುವುದು, ಅವರು ತೋರಿಸಿದ ಮಾರ್ಗದಲ್ಲೆ ನಡೆದು, ದಲಿತರು ಸ್ವಾಭಿಮಾನ, ಆತ್ಮಗೌರವ, ಸಮಾನತೆ, ವಿಷಯಗಳನ್ನು ಅರಿತು ಅದರ ಮಹತ್ವದ ಪ್ರಜ್ಞೆಯನ್ನು ಗ್ರಹಿಸಿದ್ದಾರೆ.

ವಚನಗಳಲ್ಲಿ ದಲಿತ ಪ್ರಜ್ಞೆಯನ್ನು ಅಂದಿನ ಕಾಲದಲ್ಲಿಯೂ ಸ್ಪಷ್ಟವಾಗಿ ಕಾಣಬಹುದು. ಬಸವಣ್ಣನನ್ನು ತೀವ್ರವಾಗಿ ಕಾಡಿರುವ ಸಂಗತಿಗಳಲ್ಲಿ 'ಅಸಮಾನತೆ' ಅತ್ಯಂತ ಪ್ರಮುಖವಾದದ್ದು ಎಂಬುದನ್ನು ವಚನಗಳ ಮೂಲಕ ಸ್ಪಷ್ಟಪಡಿಸಬಹುದಾಗಿದೆ.

---

೧೬. ಕೆ.ಎಸ್.ಮಾಣಿಕರಾವ ಗವಾಯಿ (ಲೇ), ಭೀಮ ಲೀಲಾ ಕವಿತೆಗಳು, ಪು.೩೩

೧೭. ಪ್ರಭಾಕರ್ ಸಂಝುಗಿರಿ (ಲೇ) ಡಾ.ಬಿ.ಆರ್.ಅಂಬೇಡ್ಕರ ಜೀವನ ಮತ್ತು ಹೋರಾಟ ಪು.೪೧, ಪ್ರ.ವ.೨೦೦೯

೧೮. ಎನ್ನ.ಆರ್.ಶಿವರಾಂ (ಲೇ) ಡಾ.ಅಂಬೇಡ್ಕರ ದರ್ಶನ ಪು-೨೨, ಪ್ರ.ವ.೨೦೦೯

"ಹೊಲೆಯ ಹೊಲಬಗನಾದಡೆ
ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯ
ಹೊಲಬುಡೆದೇ ಲಿಂ ಗ ಶರಣೆನ್ನಿರಯ್ಯಾ" [೧೯]

ಕೂಡಲಸಂಗಮದೇವನನ್ನು ಬಿಟ್ಟರೆ ಬಸವಣ್ಣ ಅತಿ ಉತ್ಸಾಹದಿಂದ ನೆನೆಯುವುದು ಮಾದಾರ ಚೆನ್ನಯ್ಯನನ್ನು ಕೆಳಜಾತಿಯವನಾದ ಚೆನ್ನಯ್ಯ ಎಂಬ ಭಕ್ತನ ಭಕ್ತನಾಗಲು ಬಸವಣ್ಣ ಇಚ್ಛಿಸುತ್ತಾರೆ. ಕಾರಣ ಕೆಳಜಾತಿಯವರಿಗೆ ಸಮಾನತೆಯನ್ನು ನೀಡಲು ಬಯಸುತ್ತಾರೆ. ಮನುಷ್ಯರಿಂದ ಕಡೆಗಣಿಸಲ್ಪಟ್ಟು ಮೂಕ ಪ್ರಾಣಿಯಂತಿರುವವನನ್ನು ಭಕ್ತನಾಗಿರುವುದೇ ಒಂದು ದೊಡ್ಡ ಪವಾಡವೆಂದು ಆತ ತಿಳಿದಿರುವುದು. ಈ ವಚನದಲ್ಲಿ ಹೊಲೆಯನಾದರೂ ಸಹ ಸರಿದಾರಿಯಲ್ಲಿ ಇರುವವನಾದರೆ ಅವನನ್ನು ಪೊರೆಯುವುದೇ ಲೇಸು ಎಂದು ಹೇಳುತ್ತಾನೆ. ಈ ವಿಶ್ವವನ್ನು ಬಸವಣ್ಣ ಕೂಡಲಸಂಗನ ಮಹಾಮನೆ ಎಂದು ಕರೆಯುತ್ತಾನೆ. ಇಷ್ಟೊಂದು ತಾರತಮ್ಯಗಳಿರುವ, ದುಷ್ಟ ಶಕ್ತಿಗಳಿಂದ ತುಂಬಿಹೋಗಿರುವ ಈ ಲೋಕವನ್ನು ಮನೆಯ ರೂಪಕದಲ್ಲಿ ಹೇಳಿ ಬಸವಣ್ಣ ಪ್ರೀತಿಯನ್ನು ತುಂಬಿದ್ದಾನೆ.

ದಲಿತರು ವಚನಕಾರರಿಂದ ದಲಿತ ಪ್ರಜ್ಞೆಯ ಸ್ಪೂರ್ತಿಯನ್ನು ಪಡೆದರು. ಅತ್ಯಂತ ಶ್ರೇಷ್ಠ ವಚನಗಳಲ್ಲೊಂದಾದ "ಇವನಾರವ ಇವನಾರವ, ಇವನಾರವ ಎಂದೆನಿಸದಿರಯ್ಯ"–[೨೦] ಎಂಬ ವಚನ ಬಸವಣ್ಣನ ಸಮಯಪ್ರಜ್ಞೆಯ ಪ್ರತೀಕ ಅದು ದಲಿತರು ತಮ್ಮವರೆಂದು ಒಳಗೊಳ್ಳುತ್ತದೆ ಮತ್ತು ದಲಿತ ಪ್ರಜ್ಞೆಯಿಂದಲೇ ತನ್ನ ವಿಸ್ತಾರವನ್ನು ಹೆಚ್ಚಿಸಿಕೊಳ್ಳುತ್ತದೆ.

"ಅಕ್ಕ ತಂಗಿಯರೇ ಬನ್ನಿರಿ ಓ
ಅಣ್ಣ ತಮ್ಮರೇ ಬನ್ನಿರಿ ಓ
ಬಾಬಾನ ನಾವು ನೀವು ನುಡಿಯಿರಿ।
ಬಾಬಾ ಸಾಹೇಬರಿಂದಲೇ ನೀವು ಬೆಳೆದಿರಿ
ತಂದೆಗೆ ಹುಟ್ಟಿ ಮಂದಿ ಹೆಸರು ಹೇಳುವಿರಿ ॥ಪ॥ [೨೧]

ಮೇಲಿನ ಹಾಡಿನಲ್ಲಿ ಅಂಬೇಡ್ಕರರು ನಮಗಾಗಿಯೇ ಹುಟ್ಟಿ ಬಂದು, ನಮಗೆ ಹಲವಾರು ಸೌಲಭ್ಯ ನೀಡಿ ಬೆಳೆಸಿದ್ದಾರೆ. ಎಂದು ಅರಿತಿರುವ ದಲಿತರು ಇತರ ದಲಿತರನ್ನು ಕುರಿತು ಶಿಕ್ಷಣ ಪ್ರಜ್ಞೆಯ ಕರೆ ನೀಡಿದ್ದಾರೆ:

"ಬ್ರಾಹ್ಮಣ ಮಂದಿ ನಮಗೆ ನೀಚ ತಿಳಿದರು
ಆ ಶಬ್ದಕ್ಕೆ ಬಾಬಾ ಮುರಿದು ಹಾಕಿ ಬಿಟ್ಟರು
ಬೌದ್ಧ ತಳದ ಸತ್ಯಾಗ್ರಹ ನೀರು ಅವರು ಕುಡಿಸಿ ಸಂತೋಷ ಪಡೆದರು
ಓ ಓ ಬಾಬಾ ಭೀಮ ದೇವರ ಭಜನಿ ಮಾಡೋಣಾ ॥ನಡಿಯಕ್ಕ ನಡಿ॥ [೨೨]

"ಧರ್ಮಜ್ಞಾನದಿಂದ ಬ್ರಾಹ್ಮಣ ಬ್ರಾಹ್ಮಣನಾಗುತ್ತಾನೆ
ಯೇ ಹೊರತು ಹುಟ್ಟು ನಿಂದಲ್ಲ" [೨೩]

ಇಲ್ಲಿ ಬ್ರಾಹ್ಮಣರು ಪ್ರಾಚೀನ ಕಾಲದಿಂದಲೂ ದಲಿತರನ್ನು ಎಷ್ಟು ನೀಚಾಗಿ ಕಾಣುತ್ತಿದ್ದರೆಂದು ಈ ಹಾಡಿನಿಂದ ತಿಳಿಯಬಹುದು. ನೀಚ ಎಂಬ ಶಬ್ದವನ್ನು ಬಾಬಾ ಸಾಹೇಬರು ಮುರಿದು ಹಾಕಿ ಬಿಟ್ಟರು. ತಳ (ಕೆರೆಯ ನೀರು)ದ ಸತ್ಯಾಗ್ರಹ ಮೂಲಕ ನೀರು ಕುಡಿಸಿ ಸಂತೋಷ ಪಟ್ಟರು ಹಾಗೂ ಎಲ್ಲರಿಗೂ ಸಮಾನತೆ ನೀಡಿದರು ಅದನ್ನು ಉಳಿಸಿಕೊಳ್ಳಬೇಕು ಎಂದು ಜಾಗೃತಿ ಮೂಡಿಸಲಾಗಿದೆ.

---

೧೯. ಡಾ.ಮಾಣಿಕರಾವ ಚನ್ನ ಸ್ವಾಮಿ(ಲೇ),ಸಾಮಾಜಿಕ ಚಳುವಳಿಗಳು ಬುದ್ಧ ಬಸವ ಬಾಬಾ ಸಾಹೇಬ ಪು.೨೯,ಪ್ರ.೨೦೦೮

೨೦. ಡಾ. ಮೂಡ್ನಾಕೂಡು ಚನ್ನಸ್ವಾಮಿ (ಲೇ) ಸಾಮಾಜಿಕ ಚಳುವಳಿಗಳು ಪು.೪೧, ಪ್ರ.೨೦೦೮

೨೧. ಕ್ಷೇತ್ರ ಕಾರ್ಯದಲ್ಲಿ ಹಾಡಿದರು ಅರ್ಜುನರಾವ ಮು.ಹಾರೊರಗಿರಿ, ದಿ:೨೦–೦೭–೦೯,

೨೨. ಅದೇ

೨೩. ಸ್ವಾಮಿ ಧರ್ಮತೀರ್ಥ (ಲೇ) ಹಿಂದೂ ಸಾಮ್ರಜ್ಯ ಶಾಹಿಯ ಇತಿಹಾಸ, ಪು–೪೭

"ಸ್ವಾತಂತ್ರ್ಯ ಸಮಾಜವಾದ ತರಬೇಕೆಂದಿದಾ
ಸದಿಕಳಿಲಾಕ ಕಳಿಸಬೇಡಿರಿ ತಾಯಿಂದರೇ
ದನಕಾಯಲಾಕ ಹಾಕ ಬ್ಯಾಡಿರಿ ತಂದೆದರೇ ॥ ಶಾಲೆಯ ಕಲಿಯಿರಿ॥ "[೨೪]

ಸ್ವಾತಂತ್ರ್ಯ ಸಮಾಜವಾದ ಪ್ರಜ್ಞೆಯನ್ನು ದಲಿತರಿಗೆ ಮೂಡಿಸಬೇಕು ಎಂದು ಬಾಬಾ ಭೀಮರು ಪ್ರಯತ್ನಿಸಿದರು ಎಂದು ಮೇಲಿನ ಹಾಡಿನಲ್ಲಿ ಹೇಳಲಾಗಿದೆ. ಹಾಗೆ ಮಕ್ಕಳನ್ನು ಹೊಲದಲ್ಲಿ ಕೆಲಸಮಾಡಲು ದನಕಾಯಲು ಕಳಿಸಬೇಡಿ ಎಂದು ಹೇಳಿದ್ದಾರೆ ಭಾರತ ದಲಿತರೇ ಮೊದಲನೆಯ ಬಹುಮಾನ ಪಡೆಯಿರಿ. ತಂದೆ ತಾಯಿಗೆ ಸಾಲ ಮಾಡಲು ಮಕ್ಕಳಾದ ನೀವು ಬಲವಂತ ಪಡಿಸಬೇಡಿ, ಸಿಂದಿ, ಗಾಂಜಾ, ದಾರು ಕುಡಿಯಬೇಡಿ. ಅನ್ಯಾಯ ವಿರುದ್ಧ ಸದಾ ಹೋರಾಡಲು ಸಿದ್ದರಾಗಿರಿ, ತಂದೆ–ತಾಯಿ ಸೇವೆ ಮಾಡಿರಿ ಎಂದು ಬಾಬಾ ಭೀಮರು ಎಚ್ಚರಗೊಳಿಸಿದ್ದಾರೆ.

"ಡಾ.ಅಂಬೇಡ್ಕರ ಮತಾಂತರ ಕುರಿತು 'ಮತಾಂತರ ಮಕ್ಕಳಾಟವಲ್ಲ. ಅದು ಮನೋರಂಜನೆಯ ವಸ್ತುವು ಅಲ್ಲ. ಮನುಷ್ಯನ ಬದುಕನ್ನು ಯಶಸ್ವಿಗೊಳಿಸುವುದೇ ಹೇಗೆ ಎಂಬುದೇ ಅದರ ತಿರುಳು. ಒಬ್ಬ ಮನುಷ್ಯನಿಗೆ ಈ ಮತಾಂತರದ ವಿಚಾರ ತುಂಬ ಪ್ರಮುಖವಾದದ್ದು. ಆದರೆ, ಅರ್ಥ ಮಾಡಿಕೊಳ್ಳಲು ಕಠಿಣವಾದ ವಿಚಾರ, ಮತಾಂತರಕ್ಕೆ ಎರಡು ಮುಖಗಳಿವೆ. ಒಂದು ಸಾಮಾಜಿಕ ಧಾರ್ಮಿಖ ಎರಡನೇಯದು ಆದ್ಯಾತ್ಮಿಕ". [೨೫] ಡಾ.ಬಾಬಾ ಸಾಹೇಬ ಅಂಬೇಡ್ಕರರವರು ೧೯೩೬ ಮೇ ೩೧ ರಂದು ಮುಂಬಯಿಯಲ್ಲಿ ಜರುಗಿದ ಮಹಾನ್ ಸಮ್ಮೇಳನದಲ್ಲಿ ಆಡಿದ ವಿವೇಕ ಪೂರ್ಣ ಮಾತುಗಳಿವು. ದಲಿತರಿಗೆ ಮತಾಂತರ ಪ್ರಜ್ಞೆ ಮೂಡಿಸಲು ಮೇಲಿನ ಮಾತನ್ನು ಹೇಳಿದರು.

"ಹಿಂದೂಗಳ ಮನೋಭಾವ ಬದಲಾಗ ಬೇಕು". [೨೬] ಎಂಬ ಅಂಬೇಡ್ಕರರ ಹೇಳಿಕೆಯಲ್ಲಿ ದಲಿತರ ಬಗ್ಗೆ ಅವರಿಗಿರುವ ಕಾಳಜಿ ವ್ಯಕ್ತವಾಗುತ್ತದೆ.

---

೨೪. ಕ್ಷೇತ್ರ ಕಾರ್ಯದಲ್ಲಿ ಹಾಡಿದರು ಅರ್ಜುನರಾವ ಮು.ಹಾರೊರಗಿರಿ, ದಿ:೨೦–೦೭–೦೯,

೨೫. ಬುದ್ಧಘೋಷ ದೇವೇಂದ್ರ ಹೆಗ್ಗಡೆ (ಲೇ) ಮತಾಂತರ ಮೀಸಲಾತಿ ಮತ್ತು ಅಂಬೇಡ್ಕರ ಪು.೭, ಪ್ರ.ವ.೨೦೦೬

೨೬. ಡಾ.ಬಿ.ಆರ್.ಅಂಬೇಡ್ಕರ ಸಾಧನೆ ಹಾಗೂ ಜೀವನ ದರ್ಶನ, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಪು.೧೬, ಪ್ರ.ವ.೧೯೮೯

# ಅಧ್ಯಾಯ – ೩

## ಬಾಬಾ ಸಾಹೇಬರ ಕುರಿತು ರಚಿಸಲಾದ ಹಾಡುಗಳ ಪ್ರಕಾರಗಳು

### ೧) ಚಾಜದ ಹಾಡುಗಳು :

ಹಿಂದೆ ಜನಪದರು ತಮ್ಮ ಮನೆಗಳಲ್ಲಿ ತಾಯಿ ತೊಟ್ಟಿಲು ತೂಗುತ್ತ, ಗರತಿ ರಾಗಿ ಬೀಸುತ್ತ, ರಸಿಕ ಗಾಡಿ ಹೊಡೆಯುತ್ತ, ಮಕ್ಕಳು ಕುಣಿಯುತ್ತ ಹಾಡುಗಳೆಲ್ಲವು ಗೀತೆಗಗಳಾಗುತ್ತಿದ್ದವು. ಇಲ್ಲಿಯವರೆಗೂ ಮೌಖಿಕವಾಗಿದ್ದ ಹಾಡುಗಳು ಅಕ್ಷರ ಜ್ಞಾನ ತಲೆದೋರಿ ಕ್ರಮೇಣ ಓದು ಬರಹ ಬೆಳೆದಂತೆ ಗ್ರಂಥಸ್ಥ ಪರಂಪರೆಯೂ ಹುಟ್ಟಿಕೊಂಡಿತು. ನಂತರ ಕಂಠಸ್ಥ ಸಂಪ್ರದಾಯ ತನ್ನ ಅನುಭವ ಹಾಗೂ ಅನಂತ ಜ್ಞಾನ ರಾಶಿಯ ಅಲ್ಪ ಭಾಗವನ್ನು ಮಾತ್ರ ಗ್ರಂಥಸ್ಥಗೊಳ್ಳಲು ಸಾಧ್ಯವಾಯಿತು.[೧] ಜಾನಪದರ ಜೀವನದ 'ಪಾಡು' ಹಾಡಾಯಿತು.

ಇಂದು ಜಾನಪದ ಗ್ರಾಮೀಣ ದಲಿತರು ಸಂಪ್ರದಾಯದ ಹಾಡುಗಳಲ್ಲಿ ವ್ಯತ್ಯಾಸ ಮಾಡಿ ಬುದ್ಧ-ಭೀಮರ ತತ್ವಗಳನ್ನು ಆಧರಿಸಿ ಕಾರ್ಯಕ್ರಮಗಳಲ್ಲಿ ಹಾಡುತ್ತಿದ್ದಾರೆ. ಪ್ರತಿವಾರದ ಬುಧವಾರ ಅಥವಾ ಪ್ರತಿ ತಿಂಗಳ ಹುಣ್ಣಿಮೆ ದಿನಗಳೆಂದು ಭಜನೆ ಸಂಘಗಳಲ್ಲಿ ಭಜನೆ ಮಾಡುವರು. ಅಲ್ಲದೆ ಶ್ರಾವಣ ಮಾಸದ ಒಂದು ತಿಂಗಳು ಪೂರ್ತಿ ಬುದ್ಧ ಭೀಮರ ಭಜನೆ ಹಾಡುಗಳನ್ನು ಭಕ್ತಿಯಿಂದ ಹಾಡುತ್ತಾರೆ. ದಿನವಿಡಿ ಕೆಲಸ ಮಾಡಿ ರಾತ್ರಿ ಆಯಾಸಗೊಳ್ಳದೆ ಭಕ್ತಿಯಲ್ಲಿ ವಿಶ್ರಾಂತಿ ಪಡೆಯುತ್ತಾರೆ. ಅಂಬೇಡ್ಕರ ಹಾಡುಗಳು ಬುದ್ಧನ ಪ್ರಾರ್ಥನೆಯಿಂದ ಪ್ರಾರಂಭಗೊಳ್ಳುತ್ತವೆ. ಪ್ರತಿ ಹಾಡಿನ ಕೊನೆಗೆ (ಕೆಲವು ಕಡೆ) "ಬೋಲೋ ಭೀಮ ಭಗವಾನ ಕೀ ಜೈ" ಎಂಬ ನುಡಿಯಿಂದ ಕೊನೆಗೊಳ್ಳುತ್ತದೆ. ಹಾಡಿನ ಆರಂಭದ ನುಡಿಯು ಪಲ್ಲದಿಂದ ಆರಂಭವಾಗುತ್ತದೆ. ಹಾಡುಗಳಿಗೆ ರಾಗ, ಲಯ, ತಾಳ ಬರಲು ತಬಲಾ, ಪೇಟ, ಏಕತಾರಿ ಯಂತಹ ಸಂಗೀತವಾದಗಳನ್ನು ಬಳಸುತ್ತಾರೆ. ಸಾಂಪ್ರದಾಯಿಕ ಹಾಡುಗಳನ್ನೇ ಜನಪದರಲ್ಲಿ ಚಾಜದ ಹಾಡುಗಳೆಂದು ಕರೆಯುವರು

### ಅ) ಬಾಬಾ ಸಾಹೇಬರ ತೊಟ್ಟಿಲು ಹಾಡುಗಳು :

"ಜೋಜೋ ಎಂದು ಜೋಕಿ ಹೊಡಿರಿಬೇಕ
ಮೂರು ಗುಣಗಳು ತಿಳಿದರಬೇಕ
ಆರು ಗುಣಗಳು ಅಳಿದಿರಬೇಕ
ಹಿಂಗೇ ಜಯಬೀಮ ಜಯ ಬುದ್ಧ ನುಡಿಯಲಿಬೇಕ ॥ ಜೋ ಜೋ॥ [೨]

ಈ ಹಾಡು ಮೇಲ್ನೋಟಕ್ಕೆ ತೊಟ್ಟಿಲ ಹಾಡಾಗಿ ಕಾಣಿದರೂ ಇದರ ಅಂತರಾಳದಲ್ಲಿ ದಲಿತರ ಮೂಢನಂಬಿಕೆ ಹೋಗಲಾಡಿಸುವ ಪ್ರಯತ್ನವಿದೆ. ಆರು ವೈರಿಗುಣಗಳನ್ನು ಅಳಿಸಿರಬೇಕು, ಮೂರು ಗುಣಗಳಾದ ಬುದ್ಧರ ಬುದ್ಧಂ, ಧಮ್ಮಂ, ಸಂಘಂ ಹಾಗೂ ಭೀಮರ ಶಿಕ್ಷಣ, ಹೋರಾಟ, ಸಂಘಟನೆ ತ್ರೀಗುಣಗಳನ್ನು ಅರಿತಿರಬೇಕು. ಬಹುದೇವೋಪಾಸನೆಯನ್ನು ತಿರಸ್ಕರಿಸಿ, ತಂದೆ-ತಾಯಿಯರಲ್ಲಿ ದೇವರನ್ನು ಕಾಣಬೇಕು. ದಲಿತರ ಮೇಲೆಲ್ಲಾ ಬಾಬರು ಬೆಳಕು ಬೀರಿದ್ದಾರೆ. ಊರಿನವರೆಲ್ಲಾ ಒಂದಾಗಿ, ಬಂಧು-ಬಾಂಧವರಲ್ಲಿ ಒಗ್ಗಟ್ಟಿನಿಂದ ಇರಬೇಕು. ಸತ್ಯ ಪಾಲಿಸದೆ ಸುಳ್ಳು ಆಡುವದಕ್ಕಿಂತ ಸಾಯುವುದು ಮೇಲು, ಮಾನವನಾಗಿ ಹಿಟ್ಟಿದ ಮೇಲೆ ಮೌಲ್ಯ ಪಾಲಿಸಬೇಕು. ಭಾರತಕ್ಕೆಲ್ಲ ಬಾಬಾ ಒಬ್ಬರ ಬೆಳಕು ಇದೆ.

---

೧. ಗೊ.ರು.ಚನ್ನಬಸಪ್ಪ (ಸಂ) ಜಾನಪದ ದರ್ಶನ : ಕನ್ನಡ ಸಾಹಿತ್ಯ ಪರಿಷತ್ತು.

೨. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಶ್ರೀಮತಿ ಸುಭದ್ರಾಬಾಯಿ ಮು.ರಾಜೇಶ್ವರ, ಬೀದರ ದಿ:೧೭-೦೭-೦೯ ರಂದು ಭೇಟಿ ನೀಡಲಾಯಿತು.

ಸಜ್ಜನರ ಸಂಘ ಮಾಡಬೇಕು, ದುರ್ಜನರ ಸಂಘವನ್ನು ತ್ಯಜಿಸಬೇಕು. ಬಾಬಾರ ಮಾರ್ಗ ಒಂದಿದ್ದರೆ ಸಾಕು.

"ಕಲ್ಲು ಕಟಕಿ ಪೂಜೆ ಬಿಟ್ಟಿರಬೇಕು" ಎಂಬ ಹಾಡಿನ ಸಾಲು ಪೂಜೆಯನ್ನು ತಿರಸ್ಕರಿಸಿ, ಬುದ್ಧ ಸಂಘ ಕಟ್ಟಬೇಕು ಎಂಬ ಆದರ್ಶಮೌಲ್ಯಗಳು ಹೊಂದಿದೆ.

'ಜೋ ಜೋ ಎಂದು ಈ ಜನ್ಮಕ್ಕೆ ಬಂದು
ನಿತ್ಯ ಬುದ್ಧ ದೇವನ ದರುಶನಕ್ಕೆಂದು
ಬಾಬಾ ಹೇಳಿದ ಮಾತು ಮನಸ್ಸಿಗೆ ತಂದು
ಬುದ್ಧ ಭೀಮರ ಜ್ಯೋತಿ ಮನೆ ಮನೆಗಿಂದು ॥ ಜೋ ॥ [೩]

ಜನಪದರು ತೊಟ್ಟಿಲು ಹಾಡುಗಳಲ್ಲಿ ಮಗುವನ್ನು ಆರ್ಶೀವಾದಿಸಿ, ಜೀವನ ಮೌಲ್ಯಗಳನ್ನು ಹುಟ್ಟಿದಾಗಿಂದಲೇ ಹೇಳುತ್ತಾರೆ. ಮಾನವ ಜನ್ಮ ಪಡೆದ ಮೇಲೆ ನಾವು ನಿತ್ಯ ಬುದ್ಧ ದೇವನ ದರುಷನ ಮಾಡಬೇಕು. ಭೀಮರ ಮಾತನ್ನು ಆಲಿಸಬೇಕು. ಬುದ್ಧ-ಭೀಮರ ಜ್ಯೋತಿ ಮನೆ ಮನೆಗೆ ಇಂದು ಬೆಳಗುತ್ತಿದೆ. ಭೀಮರು ಬಡತನದ ಮನೆಯಲ್ಲಿ ಹುಟ್ಟಿದರು. ಇವರ ಆದರ್ಶ ಶಕ್ತಿಯನ್ನು ಬಡತನ ಕಂಡು ಭಯದಿಂದ ಮಾಯವಾಯಿತು. ಭೀಮರು ಅಂಬಬಾಯಿಯಂತೆ ದುಷ್ಟ ಶಕ್ತಿ ಸಂವಹರಿಸಲು ವಿಶ್ವ ಅವತಾರ ಪಡೆದರು "ದಿಲ್ಲಿ ಸಭೆಯಲ್ಲಿ ಬಾವನ ರಾಜರ" ಸಾಲಿನಲ್ಲಿ ಭೀಮಸಾಹೇಬರು ದಿಲ್ಲಿ ಸಭೆಯಲ್ಲಿ ಉಚ್ಚ, ನೀಚ, ಬೇಧ-ಭಾವ ಬಿಡಿರಿ ಎಂದು ಹೇಳಿದರು. ದೇಶ-ವಿದೇಶಕ್ಕೆ ಬಾಬಾ ಸಂಚಾರ ಮಡಿ ಜ್ಞಾನ ಸಮುದ್ರ ಪಡೆದರು. ಕೋಟ್ಯಾನು ಕೋಟಿ ಜನರ ಸಮಸ್ಯೆಗೆ ಪರಿಹಾರ ನೀಡಲು ಅವ್ಯತಾರ ಪಡೆದು ಬಂದಿದ್ದಾರೆ. ನಮ್ಮ ನಿಜವಾದ ತಂದೆ-ತಾಯಿ ಬಾಬಾ ಸಾಹೇಬರು ಎಂದು ತಿಳಿಯಿರಿ ಎಂಬುದು ಮೇಲಿನ ಹಾಡಿನ ಆಶಯವಾಗಿದೆ.

"ಜೋಗುಳ ಹಾಡು ಹಾಡುವೆ
ಜೋ ಜೋ ಎಂದು ಜೋಗುಳ ಪಾಡಿ
ಬಾಬಾ ಭೀಮ ದೇವರ ಮೂರ್ತಿಯ ಮಾಡಿ
ತೊಟ್ಟಿಲ ತೂಗಿರಿ ಮುತ್ತೈದೇರ ಕೂಡಿ
ನಮ್ಮ ಬುದ್ಧ ಭೀಮರ ದೇವರ ಪದ್ಯವು ಹಾಡಿ ಜೋ ಜೋ ॥ [೪]

ಜೋ ಜೋ ಎಂದು ಜೋಗುಳ ಹಾಡಿ, ಭೀಮ ದೇವರ ಮೂರ್ತಿಯ ಮಾಡಿ ತೊಟ್ಟಿಲು ತೂಗಿರಿ. ಅಂಬೇಡ ಗ್ರಾಮದಲ್ಲಿ ಭೀಮಬಾಯಿ ಸುಮುತ್ರನಾಗಿ ಭೀಮರು ಜನಿಸಿದರೆಂದು ಜಾನಪದರು ಹೇಳುತ್ತಾರೆ. ಬೇಧ-ಭಾವ ನಿರ್ಣಯ ಮೂರ್ತಿ ಭಾರತದೊಳಗೆ ಜ್ಯೋತಿಯಾಗಿ ಬೆಳಕು ಹರಿಸಿದ್ದಾರೆ. ಚರ್ತುವರ್ಗ ಅತಿ ಕೆಳಸ್ಥಾನ ಮತ್ತು ಕೊನೆಯರಾದವರು ಶೂದ್ರರು. ಮನೆ ಮನೆಗೆ ಮತ ಭೇದ ಮಾಡಿ ಬ್ರಾಹ್ಮಣರು ಇಟ್ಟಿದರು. ಜಾತಿ ಭೇದ ಶೋಷಣೆ ಸಾಲದು ಎಂಬಂತೆ ಮತ ಭೇದವು ಆರಂಭಿಸಿದರು. ಆಗ ಬಡವರಿಗೆ ಬಂಧುವಾಗಿ ಭೀಮರು ಬಂದರು.

### ೨) ತಾತ್ವಿಕ ಹಾಡುಗಳು :

"ತತ್ವ" ಎಂದರೆ "ಸಿದ್ಧಾಂತ", ತತ್ವಜ್ಞಾನವನ್ನು ಬ್ರಹ್ಮಜ್ಞಾನವೆಂದು ಕರೆಯಲಾಗಿದೆ. 'ಪದ' ಎಂಬುದನ್ನು ಹದಗೊಂಡ ಶಬ್ದ ಪರಮಾತ್ಮನಿಗೆ ಸಂಬಂಧಿಸಿದ ಸಿದ್ಧಾಂತವನ್ನು ಹಾಡಿನ ಮೂಲಕ ಅಭಿವ್ಯಕ್ತಿಸುವ ಕ್ರಿಯೇಯೇ ತತ್ವಪದ. 'ತತ್ವ' ವಸ್ತುವಾದರೆ 'ಪದ' ಅಭಿವ್ಯಕ್ತಿ ಮಾಧ್ಯಮ. ಎರಡರ ಸಮನ್ವಯ ಜೊತೆಗೆ ಸಂಸ್ಕೃತಿಯೊಂದರ ಪ್ರತೀಕವೂ ಆಗಿದೆ. ತತ್ವಪದಗಳು ಹರಸಂಸ್ಕೃತಿಯನ್ನು ಹೇಳಿವೆ.[೫]

---

೩. ಕೆ.ಎಸ್. ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು ಪು.೪೦

೪. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಅರ್ಜುನರಾವ ಮು.ಹಾರೋರಗಿರಿ, ದಿ.೨೦-೦೭-೦೯

೫. ಆಯ್ದ ತತ್ವ ಪದಗಳು (ಸಂ೦ ಡಾ.ಟಿ.ಎಂ.ಭಾಸ್ಕರ್, ಪು.೭(ಪ್ರಸ್ತಾವನೆ), ಪ್ರ.ವ.೨೦೦೭

ಇಂಥ ಬ್ರಹ್ಮಜ್ಞಾನವನ್ನು ಜಾನಪದರ ಹಾಡುಗಳಲ್ಲಿ ಕಾಣಬಹುದು. ಇವರು ಅನಕ್ಷರಸ್ಥರಾಗಿದ್ದರೂ ಸಹ ಅನುಭಾವವುಳ್ಳ ತತ್ವ ಪದಗಳನ್ನು ಹಾಡುವುದು ಅವರ ಅನುಭವದಿಂದಲೇ ಈ ಹಾಡುಗಳು ಪ್ರಾಮುಖ್ಯ ಪಡೆದುಕೊಂಡಿವೆ. ಬಾಬಾ ಸಾಹೇಬರ ಹಾಡುಗಳಲ್ಲಿ ತತ್ವ ಪದಗಳನ್ನು ಕಾಣಬಹುದು.

"ನೀನೆ ಅಕ್ಕ ನಾನೇ ತಂಗಿ, ಇಬ್ಬರು ಕೂಡಾನು ಬಾ
ವಿದ್ಯೆ ಬುದ್ಧಿ ಕಲಿಯನ ಉ ಬಾ, ಗುರು ಮಾರ್ಗದಾರಿ ಹಿಡಿಯನು ಬಾ
ಬಾಬನ ಭಜನೆ ಮಾಡನು ಬಾರೆ . . . ॥ಪಲ್ಲ॥[೧]

ಈ ಭಜನೆ ಹಾಡಿನಲ್ಲಿ ಅಷ್ಟಮದ ಪಾಟೀಯ ಅಳಸಿ ಹಾಕಿ ಪವಿತ್ರ ಆಗೋಣಾ. ಬಾಬಾನ ಬಳಪದಿಂದ ಬರೆಯೋಣ "ಓಂ ನಾಂ" ಎಂಬ ಅಕ್ಷರ ಬರೆದು ಶಿಕ್ಷಣ ಆರಂಭಿಸೋಣಾ. ಮೂರನೇ ತರಗತಿ ಓದಿ ತ್ರಿಗುಣ ತಿಳಿಯೋನಾ. ರಜಗುಣ ತಮಗುಣ ಸತ್ವ ಮೂಲದೊಳು ಉಳಿಯಲು ಬೌದ್ಧ ವಿದ್ಯೆಗೆ ಪ್ರಾರ್ಥಿಸುದನ್ನು ಕುರಿತು ಹೇಳಲಾಗಿದೆ. ಐದನೆಯ ತರಗತಿ ಓದಿ 'ಪಂಚಾಕ್ಷರಿ' ಮತ್ತು ಆರನೇ ವರ್ಗ ಓದಿ 'ಷಡಕ್ಷರಿ' ಶಬ್ದ ನುಡಿಯಬೇಕು. ಏಳನೇ ತರಗತಿ ಓದಿ 'ಶಪ್ತೇಸನ' ಸುಡೋಣಾ ಒಂಬತ್ತನೆಯ ವರ್ಗ ಓದಿ 'ಸಾದ್ವಾರ' ಬಂದಿಸಬೇಕು. ಹತ್ತನೇ ತರಗತಿ ಓದಿ 'ದಸವಿಂದ್ರಿ' ಕಿಟಕಿ ತೆರೆಯೋಣಾ ಬಾ. ಬಾಬಾನ ಬೆಳಕಲಿ ಇರಬೇಕು. ದಾಂಪತ್ಯ ಬದುಕಿನ ಬಗ್ಗೆ ಹಾಗೂ ಪತಿಧರ್ಮ ಸೇವಾ ತತ್ವವನ್ನು ತಿಳಿಸುತ್ತದೆ. ಇಲ್ಲಿ ವಿದ್ಯೆಯ ಮೂಲಕ ಆಧ್ಯಾತ್ಮಿಕ ಮಾರ್ಗವನ್ನು ತೋರಿಸಲಾಗಿದೆ. ತನು, ಮನ, ಧನ ಕೊಟ್ಟು ಗುರುವಿನ ಅಂತಃಕರಣ ಬೇಡೋಣ. ಆಧ್ಯಾತ್ಮಿಕತೆಯನ್ನು ವಿದ್ಯೆಯ ಮೂಲಕ ಪಡೆಯಬೇಕೆಂಬುದು ಈ ಹಾಡಿನ ತತ್ವಗಳು ತಿಳಿಸುತ್ತದೆ.

"ಏಳಿರಿ ದಲಿತರೇ ಬನ್ನಿ ಬೇಗ ಓಡುತ
ನಿಲಂ ಕಲ್ಮಿ ಮಾವಿನ ಹಣ್ಣು
ಭೀಮ ದೇವರ ತೋಟ .. "[೨]

ಪ್ರಸ್ತುತ ಹಾಡಿನಲ್ಲಿ ಭೀಮರ ಮಾವಿನ ಹಣ್ಣಿನ ತೋಟವು ದಲಿತ ಉದ್ಧಾರದ ಹೋರಾಟದ ತೋಟವಾಗಿ ರೂಪಕಗೊಂಡಿದೆ. ಇಲ್ಲಿ ವಿದ್ಯಾಬುದ್ಧಿ ಎಂಬ ಎತ್ತುಹೂಡಿ ದಲಿತರು ಎಂಬ ಉದ್ಧಾರ ತೋಟವನ್ನು ಹಸನ ಮಾಡಿದವರು ಭೀಮ.

ನೀತಿ ಇಲ್ಲದ ಈ ಕೋತಿಗಳಿಗೆ ನೀತಿ ಹೇಳಿದವರ್‍ಯಾರು ?
ಸಂವಿಧಾನದಿ ನಮಗೆ ಸಮಹಕ್ಕು ಕೊಟ್ಟಂವಗೆ
ಶರಣಾಗಿ ನಡೆಯೋಣ ಬಾ ॥ ಭೀಮ ಬಾಬಾರ ತತ್ವ ॥[೩]

ಮೇಲಿನ ಹಾಡಿನಲ್ಲಿ ಸೃಷ್ಟಿ ನಿಯಮ ಕುರಿತು ಹಸಿರು ಎಲೆಗೆ ಹಸಿರಾಗಿಯೇ ಇಟ್ಟವರು ಯಾರು? ಹಾಗೆ ಬಣ್ಣ ಬಣ್ಣದ ಹೂಗಳಿಗೆ ಬಣ್ಣ ಕೊಟ್ಟವರು ಯಾರು ? ಎಂಬ ಪ್ರಶ್ನೆಗೆ ಉತ್ತರವಾಗಿ ಈ ಲೀಲೆ ಮಾಡಿದವರು, ಭೀಮಬಾಬಾರು ಇವರ ಅಗಾಧ ಮಹಿಮೆ ತಿಳಿದು ನಿಜಮಾರ್ಗದಲ್ಲಿ ಸಾಗೋಣ, ಹಸಿರು ಎಲೆ ಎಂದರೆ ಇಲ್ಲಿ ದಲಿತರ ಚೈತನ್ಯದ ಪ್ರತೀಕ ಎನ್ನಬಹುದು.

ಜಾತಿಯತೆ ಅನುಸರಿಸುವ ನೀತಿ ಇಲ್ಲದವರಿಗೆ ಪಾಠ ಹೇಳುವರು ಯಾರು ? ನಮಗೆ ಸಂವಿಧಾನದಲ್ಲಿ ಸಮ ಹಕ್ಕು ನೀಡಿದ ಭೀಮ ಬಾಬಾರಿಗೆ ಶರಣಾಗೋಣಾ 'ಬಾಬಾ ಸಾಹೇಬರಲ್ಲಿರುವ ವಿಶೇಷ ಘನತೆ ಏನೆಂದರೆ ಅವರಿಗೆ ತಮ್ಮ ಮೇಲೆ ಆಗಲೇ ಪರಿವಾರದವರಿಗಿಂತ ದಲಿತರ ಬಗ್ಗೆ ಹೆಚ್ಚು ಪ್ರೀತಿ, ಕಾಳಜಿ ಇತ್ತು. ಈ ಮಹಾತ್ಯಾಗಿಯ ತತ್ವದ ಮೂಲ ಅರಿತು ಅವರ ಅಂತರಾತ್ಮದಲ್ಲಿರುವ ಪ್ರೀತಿ

---

೧. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಲಲಿತಮ್ಮ ಮು.ಧನ್ನೂರ ಬೀದರ, ದಿ:೨೪-೦೮-೦೯ ರಂದು ಭೇಟಿ ನೀಡಲಾಯಿತು.
೨. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಅರ್ಜುನರಾವ ಮು.ಹಾರೋರಗಿರಿ ಬೀದರ, ದಿ: ೨೦-೦೭-೦೯ ರಂದು ಭೇಟಿ.
೩. ಅದೇ

ಕಾಣಬೇಕು. ಸರ್ವಧರ್ಮಗಳ ಮರ್ಮ ಅರಿತು, ಇದರಲ್ಲಿ ಯಾವ ಧರ್ಮ ಮಾನವೀಯತೆ ಪರವಾಗಿದೆ ಎಂದು ತಿಳಿದುಕೊಳ್ಳಬೇಕು ಅಜ್ಞಾನ ಬಿಟ್ಟು ಸುಜ್ಞಾನದ ಕಡೆಗೆ ಸಾಗೋಣಾ ಮನುಷ್ಯ ಧರ್ಮಬಿಟ್ಟು ಪ್ರಾಣಿಯಂತೆ ಅಲೆಯಬಾರದು. ನಿಜ ಮಾನವನಾಗೋಣ ಎಂದು ಮೇಲಿನ ಹಾಡಿನ ಮೂಲಕ ದಲಿತರಿಗೆ ಕರೆ ನೀಡಲಾಗಿದೆ.

"ಶರಣು ಶರಣೆನ್ನಿರಿ
ಪರಮ ಪೂಜ್ಯ ಡಾ. ಬಾಬಾಸಾಹೇಬ ಅಂಬೇಡ್ಕರರಿಗೆ
ಜಗದ ಕತ್ತಲು ಕಳೆದು ಜ್ಞಾನದ ಬೆಳಕು ಬೀರಿದಾತಗೆ

ವಂದಿಸು ಮನವೇ ಭೀಮ ಬಾಬಾಗೆ
ತನುಮನ ತನ ಅರ್ಪಿಸು ಮೊದಲಿಗೆ
ಶರಣಾಗು ಶ್ರೇಷ್ಠ ಜ್ಞಾನಿಗೆ

ಚಂಚಲ ಮನದ ಮೂಲವು ತಿಳಿದು
ನಿಜಕಾಮದ ಹಳ್ಳ ತೆಗೆದು
ಜ್ಞಾನೆಂಬೂ ಖಡ್ಗವು ಕೈಯಲ್ಲಿ ಹಿಡಿದು
ನಿಲ್ಲಿಸು ಅಜ್ಞಾನ ತಡೆದು
ಭಯಭೀತಿಯಿಂದ ಮುಕ್ತಿಯ ಪಡೆದು
ಕೊನೆಗಾಣು ಭೀಮ ತತ್ವಹಿಡಿದು
ವಂದಿಸು ಮನವೇ – – – – ||ಶರಣು ಶರಣೆನ್ನಿರಿ|| [೯]

ಬಾಬಾ ಸಾಹೇಬರು ಜ್ಞಾನಿಗಳಷ್ಟೇ ಅಲ್ಲದೇ ಮನೋವಿಜ್ಞಾನಿ ಸಹ ಆಗಿದ್ದರು ಅವರು ಚಂಚಲ ಮನದ ಮೂಲವು ತಿಳಿದಿದ್ದರು. ತನು ಮನ ಧನ ಅರ್ಪಿಸಿ ನಾವು ಶ್ರೇಷ್ಠ ಜ್ಞಾನಿಗೆ ಶರಣಾಗಬೇಕು. ಭೀಮರ ತತ್ವ ಪಾಲಿಸಿದರೆ ಮುಕ್ತಿ ಪಡೆಯುತ್ತೇವೆ. ಸರ್ವಸ್ವವೆಲ್ಲ ನಿಮ್ಮಲ್ಲಿ ಅಡಗಿದೆ. ಮಾನವರು ದೇವರ ಹೆಸರ ಮೇಲೆ ತಾವೇ ಮೆರೆಯುವುದು ಮಹಾ ಮೂರ್ಖತನ ಮಾನವರ ಸೇವೆ ಮಾಡಿ ಮಹಾದೇವರಾದರು ಭೀಮ. ನಾವು ಅವರ ಮಾರ್ಗ ಅನುಸರಿಸೋಣಾ ಎಂದು ಮೇಲಿನ ಹಾಡಲ್ಲಿ ಅಭಿವ್ಯಕ್ತಿ ಗೊಂಡಿದೆ.

"ಸರ್ವರಲ್ಲಿ ಸ್ವಾಭಿಮಾನ ಬೆಳೆಸಿ
ನಿಜಮಾರ್ಗತೋರಿದ ದೇವಗೆ ಪೂಜಿಸಿ
ಹಕ್ಕೆಂಬೊ ಖಡ್ಗದಿಂದ ವೈರಿಗೆ ಮಣಿಸಿ
ಅಳಿಸಿರಿ ಅಧರ್ಮದ ನೀತಿ
ದೇವತರಲ್ಲೇ . . . .
ಅನ್ಯಾಯದ ವಿರುದ್ಧ ದಂಗೆಯು ಎಬ್ಬಿಸಿ
ಬಡ ಮಾನವರ ಹಕ್ಕುಗಳು ರಕ್ಷಿಸಿ . . . . [೧೦]

ಪ್ರಸ್ತುತ ಹಾಡಿನಲ್ಲಿ ಬಾಬಾ ಸಾಹೇಬರು ಸರ್ವರಲ್ಲಿ ಸ್ವಾಭಿಮಾನ ಬೆಳೆಸಿದರು ಎಂದು ಹೇಳಲಾಗಿದೆ. ನಿಜಮಾರ್ಗ ತೋರಿಸಿದ ದೇವರಿಗೆ ಪೂಜಿಸಬೇಕು. ಹಕ್ಕು ಎಂಬ ಖಡ್ಗದಿಂದ ವೈರಿಯನ್ನು ಸೋಲಿಸಿ, ಅಧರ್ಮದ ನೀತಿಯನ್ನು ಅಳೀಸಿ ಹಾಕಿದರು.

---

೯. ಈಶ್ವರರಾವ ಎಂ.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೧೫ ಪ್ರ.೧೯೯೭
೧೦. ಅದೇ ಪು.೧೭

ಸತ್ಯ ಶೋಧನೆ ಮಾಡೊ
ವ್ಯರ್ಥ ಕಾಲಹರಣ ಬ್ಯಾಡೊ
ಮಾನವನಾಗಿ ಹುಟ್ಟಿದಿನೀ
ನಿಜಮಾನವ ಧರ್ಮದಿ ಕೂಡು

ಕಂಡ ಕಡೆಗೆ ತಿರುಗಿ ಕೇಳಬೇಡ
ಬೌದ್ಧ ಧರ್ಮವು ನೀ ಕೊಂಡಾಡೊ ॥ಪ॥

ನಿನ್ನೊಳು ನೀ ತಿಳಿದು ಮಾಡುಯೋಚನೆ
ಜಗತ್ತಿನ ನಿರ್ಮಾಣ ಇದು ಯಾರ ಹೊಣೆ
ನಿನ್ನ ಸ್ವಾರ್ಥಕ್ಕಾಗಿ ನೀ ದುಡಿದಿ
ನಿನ್ನ ಸರ್ವಸ್ವವೆಲ್ಲ ನೀ ಕಳೆದಿ
ನಿಸ್ವಾರ್ಥ ಸೇವೆ ನೀ ಬಿಡಬೇಡ
ಭೀಮಬಾಬರ ತತ್ವ ನೀ ಮರಿಬೇಡ
ಮಾನವನಾಗಿ ಹುಟ್ಟಿದಿ ನೀ ನಿಜ
ಮಾನವ ಧರ್ಮದಿ ಕೂಡು
ಕಂಡ ಕಡೆಗೆ ತಿರುಗಿ ಕೆಡಬೇಡ
ಬೌದ್ಧ ಧರ್ಮವು ನೀ ಕೊಂಡಾಡು ॥ ಸತ್ಯ ಶೋಧನೆ ॥ [೧೧]

ಮೇಲಿನ ಹಾಡಿನಲ್ಲಿ ಆದರ್ಶ ಮಾನವರಾದ ಬಾಬಾ ಸಾಹೇಬರ ತತ್ವ ಅನುಸರಿಸಬೇಕು. ಮಾನವನಾಗಿ ಹುಟ್ಟಿದ ಮೇಲೆ ಮಾನವ ಧರ್ಮ ಅರಿತ್ತು ಕಂಡ ಕಡೆಗೆ ತಿರುಗಿ ಕೆಟ್ಟ ಚಟ ಕಲಿಯಬಾರದು, ಮಧ್ಯೆ ಕಾಲಹರಣ ಮಾಡದೆ, ಸತ್ಯ ಶೋಧನೆ ಮಾಡಬೇಕು. 'ನಿನ್ನೊಳು ನೀ ತಿಳಿದು' ಯೋಚನೆ ಮಾಡಬೇಕು. 'ಸ್ವಾರ್ಥಕ್ಕಾಗಿ ದುಡಿದರೆ, ಸರ್ವಸ್ವವನ್ನೇ ಕಳೆದುಕೊಂಡಂತೆ ಆಗುತ್ತದೆ. ಎಷ್ಟೇ ಕಷ್ಟ ಬಂದರೂ ನಿಸ್ವಾರ್ಥ ಸೇವೆ ಬಿಡಬಾರದು.

ಬಹಳ ಶ್ರೇಷ್ಠವಾದ ಬೌದ್ಧಧರ್ಮದಲ್ಲಿ ದೀಕ್ಷೆ ಪಡೆದುಕೊಂಡು ಅಂತರಂಗದ ಶುದ್ಧ ಮಾಡಿಕೊಳ್ಳಬೇಕು. ಮಾನವ ಜನ್ಮದ ಮೂಲ ತಿಳಿಯಬೇಕು. ಮಾಯಾ, ಮೋಹ ತ್ಯಜಿಸಿದರೆ ಸುಖ ಮುಗಿಲದಷ್ಟು ವಿಶಾಲವಾಗುತ್ತದೆ. ಅಂಧಶ್ರದ್ಧೆಯಿಂದ ತಲೆಬಾರವಾಗುತ್ತದೆ. ಆದಕಾರಣ ಬೌದ್ಧ ಧರ್ಮದ ಜ್ಞಾನ ಭಂಡಾರ ತಿಳಿಯಬೇಕು ಎಂಬ ತತ್ವವನ್ನು ಮೇಲಿನ ಹಾಡಿನಲ್ಲಿ ಸರಳ ಮಾತಿನಲ್ಲೆ ಹೇಳಲಾಗಿದೆ.

"ಭೀಮ ತೆರೆದಿಟ್ಟರೊ ಜ್ಞಾನದ ಬಾಗಿಲ
ಆ ಜ್ಞಾನದಿ ನಡೆದವರು ಜ್ಞಾನಿಗಳೆಲ್ಲ
ಎಚ್ಚರಾಗಿ ಅಂತರಾತ್ಮ ತೊಳೆದು ಮೊದಲ
ನಿಜಮಾನವರಾಗಿ ಬಾಳಿರಿ ಸರ್ವೆಲ್ಲಿ ॥ಭೀಮದೇವ ನೀ॥ [೧೨]

ಈ ಹಾಡಿನಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸಿದ ಬಾಬಾ ಸಾಹೇಬರ ಜ್ಞಾನದ ಮಾರ್ಗದಲ್ಲಿ ಕೆಲವು ಜ್ಞಾನಿಗಳು ಮಾತ್ರ ನಡೆದರು. ಮೂರು ಅಂತರಾತ್ಮ ತೊಳೆದು ಮೊದಲು ನಿಜಮಾನವರಾಗಿ ಬಾಳಿರಿ ಎಂಬ ಆಶಯ ಮೂಡಿಬಂದಿದೆ.

---

೧೧. ಈಶ್ವರರಾವ.ಎಂ.ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೬, ಪ್ರ.೧೯೯೭
೧೨. ಅದೇ ಪು.೭

"ಧನ್ಯೆ ಧನ್ಯೆ ಶತಗುರುವೇ ಬುದ್ಧ"

"ಧನ್ಯೆ ಧನ್ಯೆ ಶತಗುರುವೇ ಬುದ್ಧ
ಮಾಗದು ಶಬ್ದ
ಧನ್ಯ ಧನ್ಯ ಶತಗುರುವೇ ಬುದ್ಧ" ॥ ಪಲ್ಲ ॥

ಜ್ಞಾನಿಗಳೇ ಮಾಡಿರಿ ಶೋಧ
ಏಳು ತಿಂಗಳ ಸೂಕ್ಷ್ಮ ವಾದ
ಸ್ವಯಂ ಬ್ರಹ್ಮನೇ ಅನಾದಿ ಶಬ್ದ
ಶಬ್ದ ಕೇಳಿ ಬೌದ್ಧ ಚೆಂದ ಅಂದ ॥ ಧನ್ಯೆ ಧನ್ಯೆ ॥

ಆಧಾರ ಸ್ವದೇಶ ಮಣಿಪುರವಾದ
ಅನುಮತ ಸುದ್ಧ ಅನ್ನಿಕ್ಷೇತ್ರ
ತ್ರೀವೇಣಿ ಸಂಗಮ ಸ್ನಾನ ಮಾಡಿದ
ಮೇಲು ಮಧ್ಯದಲ್ಲಿ ಭಗವಾನ ಬುದ್ಧ ॥ ಧನ್ಯೆ ಧನ್ಯೆ ॥

ಪಂಚಾಕ್ಷರಿ ಅರಿತು ಪಂಚಶೀಲದ
ಷಡಕ್ಷರಿಯ ಮಹಿಮೆ ಬರೆದ
ಬ್ರಹ್ಮ, ಪ್ರಭು ಅಲಕ ನಿರಂಜನ
ಶತಗುರುವೇ ಬುದ್ಧ ॥ ಧನ್ಯೆ ಧನ್ಯೆ ॥

ಶತಗುರುವೆಂದು ಕೇಳಿರಿ ಬೋಧ
ತನ್ನ ಸ್ವರೂಪ ತಾ ತಿಳಿವೆಂದ
ಸ್ಥೂಲ ಸೂಕ್ಷ್ಮ ಕಾರಣವಾದ
ಮಹಾ ಕಾರಣದಲ್ಲಿ ಮಾಣಿಕ ನೇತ ॥ ಧನ್ಯೆ ಧನ್ಯೆ ॥

ನಿಟ್ಟಿನೊಳಗೆ ಭಾಲ್ಕಿ ಪ್ರಸಿದ್ಧ
ಗುರು ಬಸವೇಶ್ವರ ಶರಣಕ್ಕೆ ದುಡಿದು
ತನ ಮನ ಧನದೊಳಗೆ ಅರ್ಪಿಸಿದ
ಅವರಿಗೆ ಆಗ್ಯಾರ ಮಾಣಿಕ ಶುದ್ಧ ॥ ಧನ್ಯೆ ಧನ್ಯೆ ॥ [೧೩]

ಅಂತ್ಯವಿಲ್ಲದ, ಅಳಿಸಿಹೋಗದ ಶಬ್ದ ಬುದ್ಧ, ಅಂತಹ ಗುರು, ದೇವರನ್ನು ಪಡೆದ ನಾವು ಧನ್ಯರು, ಸ್ವಯಂ ಬ್ರಹ್ಮನೇ ಅನಾದಿ ಶಬ್ದ ಆದರೂ ಬುದ್ಧ ಶಬ್ದ ಅಂದವಾಗಿದೆ ಎಂದನು ಬುದ್ಧ ತ್ರೀವೇಣಿ ಸಂಗಮದಲ್ಲಿ ಸ್ನಾನ ಮಾಡಿದರು. ಪಂಚಾಕ್ಷರಿ ಅರಿತು ಪಂಚಶೀಲದ ಷಡಕ್ಷರಿಯ ಮಹಿಮೆ ಬರೆದುರ ಬೋಧನೆಯನ್ನು ಕೇಳಿ ತನ್ನ ಸ್ವರೂಪ ತಾವೇ ತಿಳಿಯಿರಿ ಎಂದರು.

---

೧೩. ಕ್ಷೇತ್ರ ಕಾರ್ಯಗಳಲ್ಲಿ ಹಾಡಿದವರು ಕಮಲಮ್ಮ ಮು.ಧನ್ನೂರ ಬೀದರ ದಿ:೨೪-೦೮-೦೯ ರಂದು ಭೇಟಿ ಮಾಡಲಾಯಿತು.

"ವಿಶ್ವ ತ್ರೀಮೂರ್ತಿಗಳು"
ಭಗವಾನ ಬುದ್ಧ ಬಸವ ಭಾರತರತ್ನ
ವಿಶ್ವ ಭೂಷಣ ಬಾಬಾ ಅಂಬೇಡಕರನಾ ॥ಪಲ್ಲ॥

ವಿಶ್ವ ತ್ರೀಮೂತರ್ರಿ ತತ್ವಗಳು
ವಿಶ್ವ ತ್ರೀಮೂರ್ತಿ ತತ್ತ್ವವು
ಸತ್ಯ, ಅಹಿಂಸೆ, ಶಾಂತಿ, ಜ್ಯೋತಿ
ಶೀಲ, ಸಮಾದಿ, ಕರುಣಾ, ಮೈತ್ರಿ
ಒಂದೇ ಮಾನವ ಒಂದೇ ಮಾತರಂ ॥ ಭಗವಾನ ಬುದ್ಧ ॥

ಬುದ್ಧ ಬಸವ ಭೀಮನ ಮರ್ಮ ಒಂದೇ ಜೀವಾತ್ಮ
ಆಕಾರ ಮಹಾತ್ಮ ಪ್ರಾಣಿ ಪಶು ನರನಾರಿ
ತನ್ನಾವರ ಎಚ್ಚರಾಗು ॥ ಭಗವಾನ ಬುದ್ಧ ॥
ಶುದ್ಧ ಪವಿತ್ರ ಬುದ್ಧ ಧಮ್ಮ ಮಾನ್ಯಸಿ
ಬಸವ ಆಧುನಿಕ ಭೀಮ
ಸತಸಂಗಾತನ ಮನ ಧನ ಅರ್ಪಣಾ
ಪಂಚಶೀಲ ಗವಾಯಿ ಆಗಿ ಪಾವನ ॥ ಭಗವಾನ ಬುದ್ಧ ॥ [೧೪]

ವಿಶ್ವ ತ್ರೀಮೂರ್ತಿಗಳಾದ ಬುದ್ಧ, ಬಸವ, ಭೀಮ ಇವರು ಸತ್ಯ, ಅಹಿಂಸೆ, ಶಾಂತಿ, ಶೀಲ, ಜ್ಯೋತಿ, ಸಮಾದಿ, ಕರುಣಾ, ಮೈತ್ರಿ ಎಂಬ ತತ್ವಗಳು ಎಲ್ಲಾ ಮಾನವರಿಗೆ ಒಂದೇ ಆಗಿರುತ್ತವೆ. ತ್ರೀಮೂರ್ತಿಗಳಾಗಿ ಒಂದೇ ಜೀವಾತ್ಮ ಹೊಂದಿರುವರು. ಶುದ್ಧ ಪವಿತ್ರ ಬುದ್ಧ ಧರ್ಮ ಸ್ವೀಕಾರ ಮಾಡಿರಿ ಪಂಚಶೀಲ ಆರಾಧಕರಾಗಿ ಮನ, ಧನ ಅರ್ಪಿಸಿ ಪಾವನರಾಗಿರಿ.

**೩) ಧಾರ್ಮಿಕ ಹಾಡುಗಳು :**

ಶರಣರು ಹುಟ್ಟಿ ಬರುವುದಕ್ಕಿಂತ ಮುಂಚಿತವಾಗಿ ಬುದ್ಧರು ಅಪಾರ ಸಂಖ್ಯೆಯಲ್ಲಿ ಭಕ್ತಿ ವಚನಗಳನ್ನು ರಚಿಸಿದ್ದಾರೆ. ಅಷ್ಟೇ ಅಲ್ಲದೆ ಅವರು ರಚಿಸಿದ ವಚನ ಸಾಹಿತ್ಯ ಜನಪದರು ಮಾತಾಡುವ ಪಾಲಿ ಭಾಷೆಯನ್ನು ಶ್ರೀಮಂತಗೊಳಸಿದೆ ಎಂಬುದನ್ನು ವಿಚಾರವಂತರು ವಿಚಾರಿಸಬೇಕಾಗಿದೆ. ಜೊತೆಗೆ ಬುದ್ಧರ ವಚನಗಳ ಕುರಿತು ಸಂಶೋಧನೆ ಮಾಡಬೇಕಾದುದು ಅನಿವಾರ್ಯವಾಗಿದೆ. 'ಬೌದ್ಧ ಧರ್ಮದ ಪ್ರಭಾವದ ಅಂಬೇಡ್ಕರ ಹಾಡುಗಳಲ್ಲಿ ಅಪಾರವಾಗಿ ಕಂಡುಬಂದಿದೆ ಕಾರಣ ಬಾಬಾ ಸಾಹೇಬರ ಧರ್ಮವೇ ಬೌದ್ಧ ಧರ್ಮ.

ಬುದ್ಧರು ಬರೆದ ಸಾಹಿತ್ಯ ಅಪಾರ ಬುದ್ಧರು ತಮ್ಮ ಬೋಧನೆಗಳನ್ನು ತಮ್ಮ ವಚನಗಳ ಮುಖಾಂತರ ಹೇಳಿದ್ದಾರೆ. ಮಾನವನ ಬದುಕಿಗೆ ಬೇಕಾದ ಜ್ಞಾನವನ್ನು ಧಾರೆ ಬರೆದಿದ್ದಾರೆ. ಸಂಘವನ್ನು ಕಟ್ಟಿ ಧರ್ಮದ ದಾರಿಯ ಮೇಲೆ ನಡೆಯುವಂತೆ ಸೂಚಿಸಿದ್ದಾರೆ. ಅಪಾರ ಸಂಖ್ಯೆಯಲ್ಲಿ ಶಿಷ್ಯ ಬಳಗವನ್ನು ಪಡೆದುಕೊಂಡ ಬದುಕು ನಡೆದಾಡುವ ವಿಶ್ವಕೋಶವಾಗಿದ್ದರೆಂದು ಹೇಳಿದರೆ ಬಹುಶ ತಪ್ಪಾಗಲಾರದು, ಬುದ್ಧರು ಮಹಾಪರಿನಿರ್ವಾಣ ಹೊಂದಿ ಹಲವು ವರ್ಷಗಳ ಕಳೆದ ಮೇಲೆ ಅವರ ಶಿಷ್ಯ ಬಳಗದಲ್ಲಿ ಪ್ರಮುಖರಾದ ಶಿಷ್ಯರಿಂದ ಬುದ್ಧರ ವಚನಗಳ ಸಂಗ್ರಹ ಸಂಪಾದನೆಯ ಕೆಲಸ ಭರದಿಂದ ಸಾಗಿತು".[೧೫]

---

೧೪. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಅರ್ಜುನರಾವ ಮು.ಹಾರೋರಗಿರಿ ಬೀದರ, ದಿ: ೨೦-೦೭-೦೯ ರಂದು ಭೇಟಿ ನೀಡಲಾಯಿತು.

೧೫. ಡಾ.ಟಿ.ಎಂ.ಭಾಸ್ಕರ (ಲೇ) ಬೋಧಿ ವೃಕ್ಷದ ಕೆಳಗೆ ಪು.೧೧, ಪ್ರ.ವ.೨೦೦೧

ಬೌದ್ಧ ಧರ್ಮದ ಆಚಾರ–ವಿಚಾರ, ಈ ಹಾಡಿನಲ್ಲಿ ವ್ಯಕ್ತ ವಾಗಿವೆ. ಈ ಧರ್ಮದ ಶ್ರೇಷ್ಠತೆಯನ್ನು ಅರಿತ ಡಾ. ಬಾಬಾ ಸಾಹೇಬ ಅಂಬೇಡ್ಕರರು ಬೌದ್ಧ ಧರ್ಮ ಸ್ವೀಕಾರ ಮಾಡಿದರು.

"ನಾನು ಹೇಳಿದ್ದೇನೆ ಎಂದ ಮಾತ್ರಕ್ಕೆ ನೀನು ಒಪ್ಪುವ ಅಗತ್ಯವಿಲ್ಲ, ಯಾವುದನ್ನೂ ಪ್ರಶ್ನಿಸದೆ ಒಪ್ಪಿಕೊಳ್ಳಬೇಡಿ"[೧೬] ಎಂದು ಹೇಳಿ ಜಗತ್ತನ್ನೇ ಚಕಿತಗೊಳಿಸಿದ ಮಹಾದಾರ್ಶನಿಕ ಮಹಾನ ಗೌತಮ ಬುದ್ಧ.

ಬುದ್ಧ ಅರಿವಿನ ಸಂಕೇತ. ಜಗತ್ತಿನಾದ್ಯಂತ ಚಿಂತಕರು, ಜ್ಞಾನದ ಸಂಕೇತವಾಗಿ ಅಹಿಂಸೆಯ ಸಂಕೇತವಾಗಿ ಬುದ್ಧನನ್ನೆ ಒಪ್ಪಿಕೊಳ್ಳುತ್ತಾರೆ. ಗೌರವಿಸುತ್ತಾರೆ. ಬುದ್ಧ ಮನಸ್ಸಿನ ಮಾರ್ಗದರ್ಶಕ. 'ಬುದ್ಧ' ಎಂಬ ಪದದ ಅರ್ಥವೇ ಜ್ಞಾನಿ" ಎಂದಾಗುತ್ತದೆ. ಹೆಸರಿಗೆ ತಕ್ಕಂತೆ ಬುದ್ಧ ಮಹಾನ ಜ್ಞಾನಿ ಯಾಗಿದ್ದನು. ಜಗತ್ತಿನಲ್ಲಿ ಯಾರಾದರೂ ಶ್ರೇಷ್ಠ ಮಾರ್ಗದರ್ಶಕನ ಹೆಸರು ಹೇಳುವುದಾದರೆ ಅದು 'ಬುದ್ಧ' ಎಂಬುದೇ ಆಗಿರುತ್ತದೆ

ಜಯ ಭೀಮ ದೇವತಾ ಜ್ಞಾನೋದರ ಶಾಂತ
ನಮೋ ಬುದ್ಧ ಭಗವಂತ ಸಂವಿಧಾನ ಪಿತಾ ॥
ಜಯ ಭೀಮ ದೇವಾ ಜ್ಞಾನೋಹರ ಶಾಂತ [೧೭]

ಈ ಹಾಡಿನಲ್ಲಿ ಜ್ಞಾನೋದರ ಶಾಂತ ಭೀಮ ಬಾಬಾರು ಸಂವಿಧಾನ ಪಿತಾ ಎಂದು ಜನಜನಿತವಾಗಿದ್ದಾರೆ. ದಲಿತರನ್ನು ನಾಯಿ, ಬೆಕ್ಕುಗಳಿಕ್ಕಿಂತಾ ಕೀಳಾಗಿ ಕಾಣುವ ಈ ದೇಶವನ್ನು ನನ್ನ ದೇಶವೆಂದು ಹೇಗೆ ಕರೆಯಲಿ ಎಂಬ ಜಿಜ್ಞಾಸೆ ಬಾಬಾ ಸಾಹೇಬರಿಗೆ ಇತ್ತು. ಆದರೂ ಅವರ ಮನದಲ್ಲಿ ಎಲ್ಲೋ ರಾಷ್ಟ್ರ ಪ್ರೇಮ ಇದ್ದಿತು ಎಂಬುದಕ್ಕೆ ಗಾಂಧೀಜಿಯವರ ಉಪವಾಸ ಬಿಡಿಸಿದ್ದು ಅವರಲ್ಲಿರುವ ಮಾನವೀಯ ರಾಷ್ಟ್ರಪ್ರೇಮವಾಗಿತ್ತು. ಸ್ವತಂತ್ರ್ಯದಿಂದ ಸರಿಸಮಾನರಾಗಿ ಬಡತನದಿಂದ ಮುಕ್ತಿ ಪಡೆಯಬೇಕು "ಇಲಿ ಆಗಿ ಬಾಳದೆ, ಹುಲಿಯಾಗಿ ಬಾಳಬೇಕು". ಹೆಣ್ಣು ಮನಸ್ಸು ಮಾಡಿದರೆ, ಯಾವುದೇ ಕಾರ್ಯವನ್ನು ಸಾಧಿಸಿತೋರುತ್ತಾಳೆ ಎಂಬುದು ಅವರ ಅಭಿಮತವಾಗಿತ್ತು. ಆದ ಕಾರಣ ಅವರು ಸಂವಿಧಾನದಲ್ಲಿ ಹೆಣ್ಣುಮಕ್ಕಳಿಗೆ ಹಕ್ಕು ಮೀಸಲಾತಿಯನ್ನು ಒದಗಿಸಿಕೊಟ್ಟರು.

ಆ ದೇವ ಈ ದೇವರೆಂದು ನಡೆದುಕೊಂಡಿರೆಲ್ಲ
ಬಿದ್ದಂತಹ ಜನಕ್ಕೆಲ್ಲ ತುಳಿದು ಯಾರು ಎತ್ತುವರಿಲ್ಲ
ಬಡವರದ ಭಾಗ್ಯದಾತ ಓ ಓ ಬಡವರ ಭಾಗ್ಯದಾತ
ಬಾಬಾ ಹಾರೋಖುಲ್ಲ ಭಜಿಸುವರೆಲ್ಲ ॥ ಮಾನವ ॥

ಜಗದೊಳಗೆ ಜನಸಿರೆಲ್ಲ ಭಾರತ ಮಡಿಲಲ್ಲೆಲ್ಲ
ಬಾಬಾರ ಹೊರತ ನಮಗ್ಯಾರಿಲ್ಲ ತಿಳಿಯ ನಡಿರಿ ಜನರೆಲ್ಲ ಖುಲ್ಲ
ಮಾಣಿಕರ ಮಾತು ಮನನ ಓ ಓ ಮಾಡಿಕೊಳ್ಳಿ
ಮಾತು ಮನನ ಮಾಡಿ ನಡಿರೆಲ್ಲ ದಲಿತ ಜನರೆಲ್ಲ ॥ ಮಾನವ ॥ [೧೮]

---

೧೬. ಡಾ.ಮೂಡ್ನಾಕೂಡು ಚೆನ್ನಸ್ವಾಮಿ (ಲೇ) ಒಂದು ಕೊಡ ಹಾಲಿನ ಸಮರ ಪು.೯, ಪ್ರ.ವ.೨೦೦೮

೧೭. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಸರಸ್ವತಿ ಮು.ಧನ್ನೂರ ಬೀದರ, ದಿ:೨೪–೦೮–೦೯ ರಂದು ಭೇಟಿ ನೀಡಲಾಯಿತು.

೧೮. ಅದೇ

ಬಾಬಾ ಸಾಹೇಬರು ಮಾನವ ದೇವರ ರೂಪ ತಾಳಿ ಜನ್ಮ ತಾಳಿದ್ದಾರೆ. ಭಾರತದಲ್ಲಿನ ಮೂವತ್ತಾರು ಕೋಟಿ ದೇವರಲ್ಲಿ ಯಾವ ದೇವರು ಬಡವರ ಉದ್ಧಾರ ಮಾಡಲಿಲ್ಲ. ಬಿದ್ದಂತಹ ಜನರನ್ನು ಎಬ್ಬಿಸುವ ಬದಲು ತುಳಿದ್ದಾರೆ. ಇಂಥ ಸಂದರ್ಭದಲ್ಲಿ ಬಡವರ ಭಾಗ್ಯದಾತ ಒಂದು ದಲಿತರ ಜೀವನವನ್ನೇ ಬದಲಾಯಿಸಿದರು. ಬಾಬಾ ಭೀಮರ ಹೊರತು ನಮಗೆ ಬೇರೆ ಯಾರು ತಿಳಿದಿಲ್ಲ ಎಂಬುದನ್ನು ಮನನ ಮಾಡಿಕೊಳ್ಳಿ ಎಂದು ಮೇಲಿನ ಹಾಡಿನ ಮೂಲಕ ಹೇಳಲಾಗಿದೆ.

ಮಾಣಿಕ ಮಾಡಿ ನಮಸ್ಕಾರವು
ಕಲ್ಲಿ ಪೂಜ ಬೇಗ ಬೀಡು ಬೇಕ ನೋಡವ್ವ
ಹಿಂಗೆ ಬಿಡುಸ್ವಾರೇ ದೆವ್ವ ಬಾಬರವ್ವೆ
ಬುದ್ಧ ದೀಕ್ಷೆ ಪಡಿರೆವ್ವ ॥ಏನ್ನ ಕಂದಗೆ ॥ [೧೯]

ಇಲ್ಲಿ ಬಹುದೇವರ ಪೂಜೆಯೆಂಬ ದೈವ ಬಾಬಾ ಸಾಹೇಬರು ಬಿಡಿಸಿದ್ದಾರೆ. ಬುದ್ಧ ದೀಕ್ಷೆ ಪಡಿಯೋಣಾ ಎಂದು ಕರೆ ನೀಡಲಾಗಿದೆ.

ದಲಿತರ ದತ್ತ ಜೈಭೀಮರಾಯ
ಇಲ್ಲಿ ಬಡವರಿಗೆ ನೀ ಶಿವರಾಯ
ಅಲ್ಲಿ ಇರುವದು ಎಲ್ಲರ ಮಾಯ ॥ ದಲಿತರ ದತ್ತ ॥ [೨೦]

ಪ್ರಸ್ತುತ ಹಾಡಿನಲ್ಲಿ ದಲಿತರ ಪಿತಾ ಭೀಮರಾಯರು ಬಡವರಿಗೆ ಶಿವರಾಯ ರೂಪ ಪಡೆದಿದ್ದಾರೆ. ಮುದ್ದು ಮುಖದ ಮೂರ್ತಿ ಬಾಬಾ ಸಾಹೇಬರು ಹೊಂದಿದ್ದರು ಎಂದು ಅವರ ಘನ ವ್ಯಕ್ತಿತ್ವವನ್ನು ಹೇಳಲಾಗಿದೆ. ಪಂಚಶೀಲ ಭಾರತದಲ್ಲಿ ಸಾರಿದರು, ಐದು ಲಕ್ಷಕ್ಕೆ ಬೌದ್ಧದೀಕ್ಷೆ ಕೊಟ್ಟರು.

ಭೀಮ ದೇವರೇ ನಮ್ಮ ವಂದನೇ
ದೀನದಲಿತರ ಪುಣ್ಯದ ದೇವರೇ ಏ
ಭೀಮ ದೇವರೇ ಓ ನಮ್ಮ ಮದನೇ ॥ ಪ ॥

ಎಂಥ ಶಕ್ತಿ ನಿಮ್ಮದು ದೇವ
ಭೂಮಂಡಲದೊಳಗೆ ಜ್ವಾಲಾಮುಖಿ
ಭೂಕಂಪವಾಯಿತು
ಅಳಿದು ಹೋಯಿತು ಬಡತನ
ಸುವರ್ಣ ಸುಖ ಜೀವನ ಸಂತಾನ ॥ಭೀಮ ದೇವರೇ ॥ [೨೧]

ಈ ಹಾಡಿನಲ್ಲಿ ದಲಿತರಿಗೆ ಅಂಬೇಡ್ಕರರು ಸಾಮಾನ್ಯದೇವರು ಆಗಿ ಕಾಣದೇ ಪುಣ್ಯದ ದೇವರು ಆಗಿ ಕಾಣುತ್ತಾರೆ. ಭೀಮ ದೇವರ ಶಕ್ತಿಯಿಂದ ಭೂಮಂಡಲದೊಳಗೆ ಜ್ವಾಲಾಮುಖಿ ಭೂಕಂಪವಾಯಿತು. ಎಂದರೆ ಭೂಮಿಯಲ್ಲಿರುವ ದಲಿತರಿಗೆ ಏಳಿಗೆ ದೊರಕಿತು. ಆದಿಕಾಲದಿಂದಲೂ ಇದ್ದಿರುವ ಜಾತಿ ಬೇಧ-ಭಾವ ಅಳಿದು ಹೋಯಿತು. ಸಮಗ್ರ ಸಂತಾನಕ್ಕೆ ಸುವರ್ಣ ಸುಖ ದೊರೆಯಿತು ಎಂದು ಬಾಬಾಸಾಹೇಬರ ಶಕ್ತಿ ವರ್ಣಿಸಲಾಗಿದೆ.

ಸನ್ಮಾರ್ಗದ ಬೆಳಕ ನೀಡಿದ ನಮಗಾಗಿ
ಆಶಾದುಃಖಕ್ಕೆ ಮೂಲ ಎಂದ ಮಹಾತ್ಯಾಗಿ ॥ ಬುದ್ಧ ಬಂದರಮ್ಮಾ ॥
ಸ್ವಾರ್ಥ ಸಾಧನೆಬಾಬಾ ಬಳಸುವೇ ಯಾರಿಗಾಗಿ
ನಿಂದೆ ನಿಜ ಇಲ್ಲಿ ಕುಂತಿದೆ ಮರುಳಾಗಿ ॥ ಬುದ್ಧ ಬಂದರಮ್ಮಾ ॥ [೨೨]

---

೧೯. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು ಪು.೨೩

೨೦. ಅದೇ ಪು.೨೦

೨೧. ಕ್ಷೇತ್ರ ಕಾರ್ಯದಲ್ಲಿ ವಕ್ತಾರರು ಕಮಲಮ್ಮ ಮು.ಧನ್ನೂರ, ಬೀದರ, ದಿ : ೨೪-೦೮-೦೯ ರಂದು ಭೇಟಿ.

೨೨. ಅದೇ.

ಮೇಲಿನ ಹಾಡಿನಲ್ಲಿ ಲೋಕ ಕಲ್ಯಾಣಕ್ಕಾಗಿ ಬುದ್ಧಜನ್ಮ ತಾಳಿ ಬಂದರು. ಬಡವರ ಉದ್ಧಾರಕ್ಕಾಗಿ ಭೀಮ ಬಂದರು. ಬಡವರ ಸೇವೆ ಮಾಡಿದರೆ,ದೇವ ಸೇವೆ ಮಾಡಿದ ಹಾಗೆ, ದೇಶ ಸೇವೆಯ ಮಾಡಿದರೆ ಈಶ ಸೇವೆ ಮಾಡಿದಂತೆ ಆಗುತ್ತದೆ. ಬುದ್ಧ ದೇವರು ಸರ್ವಸ್ವ ತ್ಯಾಗ ಮಾಡಿ ಸತ್ಯಶೋಧನೆಗಾಗಿ ಹೊರಟರು. ನಂತರ ಜ್ಞಾನ ಗಳಿಸಿ ಆಸೆ ದುಃಖಕ್ಕೆ ಮೂಲ ಎಂದು ಸನ್ಮಾರ್ಗ ಬೆಳಕ ತೋರಿಸಿದ ಮಹಾತ್ಯಾಗಿ ಬುದ್ಧ. ಸ್ವಾರ್ಥ ಸಾಧನೆಗಾಗಿ ಗಳಿಸಿದರೆ ನಿಂದೆ ನಮಗಾಗಿ ದಾರಿನೋಡುತ್ತಿರುತ್ತದೆ. ನಿಜ ಅರಿಯದೆ ಮರುಳಾಗಿ ಕೂಡಬೇಡಿರಿ., ಮನುಷ್ಯರೇ ನಿಸ್ವಾರ್ಥಿ ಸೇವೆ ಸಲ್ಲಿಸಿದ ಭೀಮಬಾಬಾರು ನಿಜವಾದ ಜ್ಞಾನಿ ಎಂಬುದು ಇಲ್ಲಿನ ಭಾವಾರ್ಥವಾಗಿದೆ.

### "ಜಯ ಜಯ ಭೀಮರಾಯ"

**ರಾಗ – ಥೈ ಥೈ ಥೈ ಎಂದು ಕುಣಿಯಲೆ**

ಜಯ ಜಯ ಭೀಮರಾಯ
ನೀನೆ ದಲಿತರ ಶಿವರಾಯ ॥ ಪಲ್ಲ ॥

ಬಾವನೆ ರಾಜರನ್ನು ಒಟ್ಟು ಕೂಡಿಸಿ
ಪಾರ್ಲಿಮೆಂಟದೊಳು ಹೌದು ಹೌದು ಎನಿಸಿ
ಮನುವಿನ ಕಾಯ್ದೆ ಸುಟ್ಟಿ ಭೀಮ
ಸರಿಸಮ ಮಾಡಿಟ್ಟ ॥ ಜಯ ಜಯ ॥

ಕಾಲನು ಕಾಲ ಕಷ್ಟನು ಭೋಗಿಸಿ
ದೀನ ದಲಿತಗರ ಸರಪಳಿ ಬಿಡಿಸಿ
ಬಡವರ ಬಿಟ್ಟಿ ಬಿಡಿಸಿ ಭೀಮ
ಅಂಗ್ರೇಜ್ ಬಟ್ಟಿ ತೊಡಿಸಿ ॥ ಜಯ ಜಯ ॥

ಜಾತಿ ಭೇದವ ರೋಗವ ಅಳಿಸಿ
ಭಾರತ ಬಡವರ ಜೀವವು ಉಳಸಿ
ಮಾನ ಮರ್ಯಾದೆ ಕೊಟ್ಟಿ ಭೀಮ
ಮಾಣಿಕರ ಮನೆ ಮುಟ್ಟಿ ॥ ಜಯ ಜಯ ॥ [೨೩]

"ಹೌದು ಹೌದು" ಎಂಬ ಪದವು ವಚನಗಳನ್ನು ನೆನಪಿಸುತ್ತದೆ. ಬಸವಣ್ಣನವರ ವಚನದಲ್ಲಿ ಲಿಂಗ ಮೆಚ್ಚಿ ಅಹುದು ಅಹುದು ಎನ್ನಬೇಕು ಎಂಬ ನುಡಿ ಇಲ್ಲಿ ಅಂಬೇಡ್ಕರ ಹಾಡುಗಳಲ್ಲಿ ವ್ಯಕ್ತವಾಗಿದೆ. ಕಾರಣ ಬಸವ, ಭೀಮ ಒಂದೇ ಗುರಿ ಹೊಂದಿದ್ದರು. ಆದರೆ ಮಾರ್ಗ ಬೇರೆಯಾಗಿದ್ದವು ಬಸವಣ್ಣನವರು ಭಕ್ತಿ ಮಾರ್ಗದಿಂದ ಶಿವನನ್ನು ಮೆಚ್ಚುವಂತಹ ಮಾತು ನುಡಿ ಇರಬೇಕೆಂದರು ಆದರೆ ಭೀಮರು ಹೋರಾಟದ ಮಾರ್ಗದಿಂದ ದಲಿತರನ್ನು ಮೆಚ್ಚುವಂತಹ ಸಂವಿಧಾನ ರಚಿಸಿ, ಪಾರ್ಲಿಮೆಂಟ ಹೌದು ಹೌದು ಎನಿಸುವಂತಾಯಿತು 'ಮನು' ಹೆಣ್ಣಿಗೆ ಯಾವುದೇ ಹಕ್ಕಿಲ್ಲ ಎಂಬ ಕಾಯ್ದೆಯನ್ನು ಭೀಮ ಸುಟ್ಟು ಹಾಕಿ ಸರಿಸಮ ಕಾಯ್ದೆ ರೂಪಿಸಿದರು. ಜಾತಿ ಭೇದದ ರೋಗವ ಅಳಿಸಿ, ಭಾರತ ಬಡವರ ಜೀವ ಉಳಿಸಿದ್ದಾರೆ.

---

೨೩. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು ಪು.೨೮

### "ಬಾಬಾ ಬಂದು ಮಾಡಿದ ಒಂದು"

ರಾಗ – ಆನಂದ ಭೈರವಿ

ಬಾಬಾ ಬಂದು ಮಾಡಿದ ಒಂದು
ಸಂವಿಧಾನ ಭಾರತ ಬರೆದು ಮತ್ತೊಂದು ॥ ಪಲ್ಲ ॥

ನಿಮ್ಮ ಊರ ನಾಮ ಅಂಬೇಡ ಗ್ರಾಮ
ಆನ್ಮ ತಾಳೇ ಭೀಮ ಸುಂದರ ಶಾಮ
ಹದಿನಾಲ್ಕು ಏಪ್ರೀಲಕ ಮೂಡಿದಂಗೆ ಬ್ರಹ್ಮ
ಕವಿದ ಕತ್ತಲು ಕಳೆದ ಬಾಬಾ ಭೀಮ ॥ ಬಾಬ ॥

ಹೆತ್ತಮಾತ ತಾಯಿ ಭೀಮಬಾಯಿ
ನಿಮ್ಮ ತಂದೆ ರಾಮಾಜಿ ಸರ್ಕಾರಿ ಸಿಪಾಯಿ
ಭಾರತ ಭೂದೇವಿ ಮಾಡಿ ವಿದಾಯಿ
ಸೂರ್ಯ ಚಂದಿರನಂತೆ ಬಿದ್ದಂಗೆ ಛಾಯಿ ॥ ಬಾಬ ॥

ನಿನ್ನ ದೇಹ ವಜ್ರ ಅವುತಾರ ಪುರುಷ
ಹನ್ನೊಂದನೆ ಅವುತಾರ ಬಂದಿ ಭೀಮ
ಭಾರತ ಹಣಬಾರ ಬರೆದು ಭವಿಷ್ಯ
ಮಾನವ ರೂಪ ತೊಟ್ಟ ಬಾಬ ವೇಶ್ಯ ॥ ಬಾಬಾ ॥

ಜ್ಞಾನ ಭಂಡಾರದ ಬಾಗಿಲ ದ್ವಾರ
ಬೆಳಕವು ಹರಡಿ ಬಾಬ ಅಂಬೇಡ್ಕರ
ದೀಕ್ಷ ಪಡಿರಿ ಗುರು ಭಿಕ್ಷು ಭದೀತಾರ
ಬಾಲ ಮಾಣಿಕ ಮಾಡಿ ನಮಸ್ಕಾರ ॥ ಬಾಬಾ ॥ [೧೪]

ಸಂವಿಧಾನ ಬರೆದು ನಮ್ಮೆಲ್ಲರೂ ಒಂದು ಮಾಡಿದ ಭೀಮ, ಬ್ರಹ್ಮನಾಗಿ ಹುಟ್ಟಿಬಂದಿದಾನೆ. ಭೂಮಿ ಮೇಲೆ ಸೊಗಸು ಸೂರ್-ಚಂದ್ರರ ಛಾಯೆ ಬಿದ್ದಂತೆ, ದಲಿತ ಜೀವನದ ಮೇಲೆ ಭೀಮರ ಛಾಯೆ ಮೂಡಿದೆ. ಭೀಮರ ದೇಹ ವಜ್ರದ ಹಾಗೆ ಹೊಳಪುಳ್ಳ ವ್ಯಕ್ತಿತ್ವವಾಗಿದೆ. ಹನ್ನೊಂದನೆ ಅವತಾರ ಪುರುಷನಾಗಿ ಬಂದಿರುವ ಭಾರತ ಹಣಿಬಾರ ಬರೆದು ಭವಿಷ್ಯ, ಮಾನವ ರೂಪ ತೊಟ್ಟ ಬಾಬ ವೇಷ ಜ್ಞಾನ ಭಂಡಾರದ ಬೆಳಕು ಹರಡಿಸಿದ್ದಾರೆ. ದೀಕ್ಷೆ ಪಡೆದು ನಮಸ್ಕಾರ ಮಾಡಿರಿ ಭಕ್ತಿಯಿಂದ ಭೀಮರಿಗೆ ಎಂದು ಮೇಲಿನ ಹಾಡಿನ ಮೂಲಕ ಅವರ ಮಹಿಮೆ ತಿಳಿಸಲಾಗಿದೆ.

### "ಗುಲ್ಬರ್ಗಾ ವಿಹಾರ ಚೆಂದ"

ಗುಲ್ಬರ್ಗಾ ವಿಹಾರ ಚೆಂದ
ಗುಲಾಬಿ ಹೂವಿನ ಗಂಧಾ
ಬುದ್ಧನಿಗೆ ಶರಣು ನೀ ಬಾರೋ
ನಿರ್ವಾಣ ಪತವಾ ಸೇರೋ

---

೧೪. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಸರಸ್ವತಿ ಮು.ಧನ್ನೂರ, ಬೀದರ ದಿ: ೧೪-೦೮-೦೯ ರಂದು ಭೇಟಿ

ತಥಾಗತ ಗೌತಮ ಬುದ್ಧ
ನೆಲೆಸ್ಯಾನೊ ಇಲ್ಲಿಗೆ ಬಂದು
ಧಮ್ಮಕ್ಕೆ ಶರಣು ನೀ ಬಾರೋ
ನಿರ್ವಾಣ ಪಥವಾ ಸೇರೋ

ದ್ವಾರವಾಗಿಲು ಚೆಂದಾ ಶ್ಲೋಕದಾ ಎತ್ತರಾ
ಮುಂದಾ ಇತಿಹಾಸ ಶಾಸನದಿಂದ ಕೆತ್ತ್ಯಾರ
ಉತ್ತಿದ್ದಾ ಗಂಥಾ
ಅಜಂತಾ ಎಲ್ಲೋರಾ ಗುಹೆಯು
ಸಾರನಾಥ ಬುದ್ಧ ಗವಿಯು
ರಾಜಗಿರಿ ಕುಶಾನರ ಒಂದು ನಾಗಪುರ
ಮಾಡ್ಯಾದೋ ಇಂದು ಸಂಘಕ್ಕೆ ಶರಣು
ನೀ ಬಾರೋ ನಿರ್ವಾಣ ಪಥವಾ ಸೇರೋ

॥ ಗುಲ್ಬರ್ಗಾ ವಿಹಾರ ॥

ಅಶೋಕಾ ಸ್ತಂಭವಾ ನೋಡು
ಧಮ್ಮ ಚರಿತ್ರೆಯ ಹಾಡು
ಭಾರತ ನಮ್ಮದು ನಾಡು
ಬುದ್ಧ ಜೈನರ ಬೀಡು
ಶಾಖ ಮೌರ್ಯ ನಾಗವಂಶ
ನಾವೆಲ್ಲಾ ಅವರ ಅಂಶ
ಗತಿಕಾಲದ ನೆನಪು ಇರಲಿ
ಬೌದ್ಧ ರಾಜ ಮರಳಿ ಬರಲಿ
ಬುದ್ಧನಿಗೆ ಶರಣು ನೀ ಬಾರೋ
ನಿರ್ವಾಣ ಪತವಾ ಸೇರೋ

॥ ತಥಾಗತ ॥

ಪಂಚಶೀಲಾ ಧ್ವಜವು ಚೆಂದಾ
ಹಿಡಿದರೆ ಪರಮಾನಂದಾ
ನೀ ಬಾರೊ ಹರಕೆ ಹೊತ್ತು
ಕಳೆಯುವುದು ಆಪತ್ತು
ಬುದ್ಧ ಭೀಮರ ಶಕ್ತಿ
ಖರ್ಗೆ ಅವರಾ ಭಕ್ತಿ
ಕಷ್ಟ ಜೀವಿ ಸ್ಮರಣೆ ಇರಲಿ
ನಿಷ್ಠೆ ಜನರು ಸದಾ ಬರಲಿ
ಬುದ್ಧನಿಗೆ ಶರಣು ನೀ ಬಾರೋ
ನಿರ್ವಾಣ ಪತವಾ ಸೇರೋ

॥ ತಥಾಗತ ॥

ಕಾಲಿದ್ದರೆ ಓಡುತ್ತಾ ಬಾರೋ
ಕುಂಟಾದ್ರೆ ತೇವಳುತ್ತಾ ಬಾರೋ
ಕಣ್ಣಿದ್ದರೆ ತಪ್ಪದೇ ನೋಡು
ಕುರುಡಾದ್ರೆ ಚಿತ್ತದಿ ಕಾಣೋ
ಕಿವುಡ ಮೂಕರು ಮೌನ
ಮಾಡ್ತಾರೋ ಬುದ್ಧನ ಧ್ಯಾನ
ಭಾಷೆಗೆ ಶೋಭಾ ನೀಡಿ
ಧಮ್ಮ ಅಮೃತವಾ ಸಾರಿ
ಸಂಘಕ್ಕೆ ಶರಣು ನೀ ಬಾರೋ
ನಿರ್ವಾಣ ಪತವಾ ಸೇರೋ

॥ ತಥಾಗತ ॥ [೨೫]

ನಾನು ಹುಮನಾಬಾದ ತಾಲ್ಲೂಕಿನ ಚಿಟಗುಪ್ಪಾ ಗ್ರಾಮಕ್ಕೆ ಕ್ಷೇತ್ರಕ್ಕಾಗಿ ಹೋದಾಗ ಸಂಗ್ರಹವಾದ ಈ ಹಾಡಿನಲ್ಲಿ ಗುಲ್ಬರ್ಗಾ ವಿಹಾರದ ಚೆಂದವನ್ನು ಹಾಗೂ ಬುದ್ಧನಿಗೆ ಎಂದರೆ ಬೌದ್ಧ ಧರ್ಮದಲ್ಲಿ ಮೋಕ್ಷ, ಬುದ್ಧನ ಭಕ್ತರಾಗಿ ಮೋಕ್ಷ ಪಡೆಯಬೇಕು. ಪ್ರಸಿದ್ಧ ರಾಜಕಾರಣಿ ಮಲ್ಲಿಕಾರ್ಜುನ ಖರ್ಗೆಯವರ ಬೌದ್ಧ ಭಕ್ತಿಯು ಸಹ ಇಲ್ಲಿ ವ್ಯಕ್ತವಾಗಿದೆ. ಭಕ್ತರು ಕಿವುಡ, ಮೂಕನಾದರೂ ಮೌನದಿಂದ ಬುದ್ಧನ ಧ್ಯಾನ ಮಾಡುತ್ತಾರೆ. ತಪ್ಪದೆ ಒಮ್ಮೆ ಬುದ್ಧ ವಿವಾರ ನೋಡಬೇಕೆಂಬುದರ ಭಕ್ತಿ ಅನಿವಾಯರ್ಕತೆ ಈ ಹಾಡಿನಿಂದ ತಿಳಿಯುತ್ತದೆ. ಬುದ್ಧ ವಿಹಾರ ನಿರ್ಮಾಣವಾದ ಸಂಗತಿಯನ್ನು ಚಾರಿತ್ರಿಕ ದಾಖಲೆಯಾಗಿಸುವ ಪ್ರಯತ್ನ ಇಲ್ಲಿದೆ.

ಗುಲ್ಬರ್ಗಾ ಬುದ್ಧ ವಿಹಾರವು ಪ್ರಸಿದ್ಧ ದೇವರಯಾತ್ರೆ ಸ್ಥಳವಾಗಿದೆ. ಅಲ್ಲದೆ ಇದನ್ನು ಎರಡನೆಯ ನಾಗಮುರವೆಂದು ಖ್ಯಾತಿ ಪಡೆದ ಪ್ರೇಕ್ಷಣೀಯ ಸ್ಥಳವಾಗಿದೆ.

**ಒಡೆದ ಕಲ್ಲುಗಳೆಂದು ತಿಳಿಬ್ಯಾಡೋ**

ಒಡೆದ ಕಲ್ಲುಗಳೆಂದು ತಿಳಿಬ್ಯಾಡೋ
ಮನುಜಾ ಚರಿತೆ ಹಡೆದಾ ಮಕ್ಕಳೆಂದು
ತಿಳಿಬೇಕು ಸಹಜಾ

ಆ ಆ ಧಮ್ಮಂ ಶರಣಂ ಗಚ್ಛಾಮಿ
ಜಗದಾ ಜೋಗುಳ ಕಟ್ಟಿ ಲಾಲಿ ಹಾಡಿದ
ಕಂದಮ್ಮಗೆ ಹಾಲು ಉಣಿಸಿದ ಎದೆಯು
ಬರಡು ಮನಕ್ಕೆ ಉಕ್ಕಿ ಹರಿದ ಕರುಣೆಯ

ಕಡಲು ಕಾಲ ಕತ್ತಲಯೊಳಗಾ
ಸುರಿದ ಬುದ್ಧನಾ ಬೆಳಕು

॥ ಒಡೆದ ॥

---

೨೫. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಜಯಶ್ರೀ ಮು.ಚಿಟಗುಪ್ಪಾ, ಬೀದರ ದಿ:೨೯-೦೭-೦೯ ರಂದು ಭೇಟಿ

ನಾಲ್ಕು ದಿಕ್ಕನ್ನು ಸರಾಸಿ ಕಡಲು ತೆರೆಗಳ
ಇಸಿ ಲಂಕಾ ಬ್ರಹ್ಮವಾ ಮುಟ್ಟಿ ಕಂದಾ
ಹಾರವ ತಟ್ಟಿ ಗಂಗೆ ಗೋದಾವರಿ
ತುಂಗೆ ಕೃಷ್ಣ ಭೀಮ
ಹರಿಸಿ ರಾಜ ಶಾಸನವು ಬರಿಸಿ

ಯುಗದ ತೊಟ್ಟಿಲದೊಳಗಾ ಮಗುವೊಂದು
ನಲಿತ್ತಿತ್ತು ಹಾಲು ಚೆಲ್ಲಿದ ಚಂದ್ರ
ಘಲು ಕುಲು ನಗುತ್ತಿದ್ದ
ಮಾರಿ ಮಸಣಿಯು ಒಂದು ಹಾರಿ
ಕುಕ್ಕಿತು ಹದ್ದು
ಕಲ್ಲರಿಗೆ ಒಡೆಯಿತು ಕಂದನಾ
ಹೃದಯಾ ॥ ಒಡೆದ ಕಲ್ಲು ॥ [೨೬]

ಮನದ ಕತ್ತಲಿಗೆ ಬುದ್ಧ ಬೆಳಕು ನೀಡಿ ಕತ್ತಲು ದೂರ ಮಾಡಿದ್ದಾರೆ. ಐತಿಹಾಸಿಕತೆಯನ್ನು ಹೇಳುವ ಸಾರುವ ಈ ಬುದ್ಧನ ಹಾಡು ಯುಗದ ಚಿತ್ರಣವನ್ನು ಸಾರುತ್ತದೆ.

**ಬುದ್ಧ ಭೀಮದೇವ ನಿನ್ನ ನಾವು**

ರಾಗ – ದಿದಿ ತೇರಾ ದೇವರ್ ದಿವಾನಾ

ಬುದ್ಧ ಭೀಮದೇವ ನಿನ್ನ ನಾಮ
ಹಗಲಿರುಳು ಮಾಡುವೆ ನಿಮ್ಮಧ್ಯಾನ ॥ ಪಲ್ಲ ॥

ಬುದ್ಧ ಆತ್ಮದಲ್ಲಿ ಐಕ್ಯಾ ಆದಿ ನೀನ
ಸರ್ವ ಆತ್ಮದಲ್ಲಿ ಭೀಮ ಬಾಬ ಲೀನ
ಚೇಡ ಬಡವರಿಗೆ ವಿದ್ಯೆಯು ದಾನ
ಪುನಃ ಹುಟ್ಟಿ ಬಂದು ನೀಡೊ ಬುದ್ಧ ಜ್ಞಾನ
ನಾಗಪುರ ದೀಕ್ಷಭೂಮಿ ಬೆಳಕಿನ
ಐದು ಲಕ್ಷ ಜನರ ಉದ್ಧಾರಣ ॥ ಬುದ್ಧ ಭೀಮ ॥

ನಿನ್ನಯ ನಾಮ ಎಷ್ಟೊ ರುಚಿತಾನ
ಎಂತಹ ಮನ ಕರಗೆ ಸವಿನೂಸಿ ಜೇನ
ಚೇಡ ನುಡಿಯಲ್ಲಿ ಹಸು ಹೊಳಪಿನ
ಭೀಮ ನಾಮ ಮೆಚ್ಚಿ ಚಂದ್ರಮನ
ನಿನ್ನ ದಾರಿ ಕಾಯ್ದ ಬಡ ಜನ
ರಾತ್ರಿ ಹಗಲು ಮಾಡುತ ನಿಮ್ಮ ಧ್ಯಾನ ॥ ಬುದ್ಧ ಭೀಮ ॥

ಬಾಬಾ ಬರುವರೆಂದು ಕುಳಿತ ದಲಿತ ಜನ
ಎಲ್ಲಿ ಹುಡುಕಲಿ ಭೀಮದೇವ ನಿನ್ನ
ಚೇಡ ಕನಸು ಮನಸ್ಸಿನಲ್ಲಿ ಬಂದು ನಿನ್ನ

---

೨೬. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಜಯಶ್ರೀ ಮು.ಚಿಟಗುಪ್ಪಾ, ಬೀದರ ದಿ:೨೯-೦೭-೦೯ ರಂದು ಭೇಟಿ

ಬಿದ್ದು ಬರಿದಾಯ್ತು ನಿಮ್ಮ ರೂಪ ಜ್ಞಾನ
ಎಷ್ಟು ಹೊಗಳಿ ಹೇಳಲಿ ತಂದೆ ನಿನ್ನ
ಮಾಣಿಕ ಮುತ್ತುನ ರವ ರತ್ನ ಚಿನ್ನ ॥ ಬುದ್ಧ ಭೀಮ ॥ [೨೭]

ಬುದ್ಧ ದೇವರ ಆತ್ಮದಲ್ಲಿ ಭೀಮ ಐಕ್ಯರಾದಂತೆ ಸರ್ವರ ಆತ್ಮದಲ್ಲಿ ಭೀಮರು ಲೀನರಾಗಿದ್ದಾರೆ.

**ಭಾರತ ಬಡವರ ಬಾಬಾ ಪರದೇಶಿ ತಂದೆ**

ರಾಗ–ಪದೇಶಿಯಂವ ಸೇನಾ

ಭಾರತ ಬಡವರ ಬಾಬ ಪರದೇಶಿ ತಂದೆ
ಮತ್ತೆ ಹುಟ್ಟಿ ಬಂದು ಬಾಬ ಮುಖ ತೋರೊ ಒಂದೆ ॥ ಪಲ್ಲ ॥

ತಾಯಿ ಸೆರೆಯ ಬಿಡಿಸಿ ಕೃಷ್ಣ ಗೊಲ್ಲನಾಗಿ ಉಳಿದ
ತಾಯಿ ಮಾತು ನಡೆಸಿ ಕಣ್ಣ ಬಿಲ್ಲ ತೊರೆದು ಬಾಳಿದ
ಕಾಯ್ದೆ ಮಂತ್ರಿಯಾಗಿ ಬಾಬ ಸರಿಸಮರಾಜ್ಯ ಮಾಡಿದ ॥ ಭಾರತ ॥

ಸುಂದರ ವೃಕ್ಷದ ಖಾಂಡನ ದೇಶ
ಮದ್ಯ ಪಾಂಡವ ಒಂದು ಮಾಡಿ ಹೋದ ನಾಶ
ಮುಟ್ಟಿ ಎಂಬೊ ಕ್ರಿಮಿ ಕೀಟಕ ಸುಟ್ಟ ಭೀಮುಷ ॥ ಭಾರತ ॥

ಲುಂಬಿಣಿ ವನದಲ್ಲಿ ಬಂದಿ ಸಿದ್ದಾರ್ಥ ನೀ ಹುಟ್ಟಿ
ವರ್ಣ ಹಿಂದು ಧರ್ಮಕ್ಕೆ ಕಳಂಕ
ಬುದ್ದಾಗಿ ಭಾರತವ ಬೆಳಕಿನ ಮಾಡಿಟ್ಟ ॥ ಭಾರತ ॥

ಅರಳಿಯ ನೆರಳಲ್ಲಿ ಅನುಭವ ಪಡೆದು
ಬುದ್ಧ ಪಕ್ಷಿ ಪ್ರಾಣಿಯ ಪೂರ್ವಜನ್ಮ ತಾಳಿದು
ಸರ್ವ ಶ್ರೇಷ್ಠ ಆತ್ಮರಲ್ಲಿ ಅಮರಾಗಿ ಉಳಿದು ॥ ಭಾರತ ॥

ಸ್ವರ್ಗ ವಾಸಿಯಾದ ಬುದ್ಧ ಭೀಮದೇವ
ಹಗಲಿರಳು ಮಾಡುವ ನಿಮ್ಮ ನಾಮ ಧ್ಯಾನವ ಮಾಡುವೆ
ಮಾಣಿಕ ಮಾಡುತ್ತಿರುವ ಬುದ್ಧ ಧರ್ಮ ಸೇವ ॥ ಭಾರತ ॥[೨೮]

ಬುದ್ಧ ದೇವರು ಪವಿತ್ರರಾಗಿದ್ದಾರೆ, ಹಿಂದೂ ಧರ್ಮಕ್ಕೆ ಕಳಂಕ ತಂದೆ ವರ್ಣನೀತಿಯನ್ನು ಖಂಡಿಸಿದರು. ಅರಳೆ ಮರದ ನೆರಳಲ್ಲಿ ಅನುಭವ ಪಡೆದರು. ಮಹಾ ಕಾರ್ಯಗಳಿಂದ ಸ್ವರ್ಗವಾಸಿಯಾದ ಬುದ್ಧ ನಾವು ಧ್ಯಾನ ಮಾಡುತ್ತಾ ನಾವು ಧನ್ಯರಾಗುತ್ತೇವೆ.

ಆದಿ ಅನಾದಿ ತತ್ವದ ಬೋಧ ಯಾರಿಗೆ ಗೊತ್ತ
ಆದಿ ಅನಾದಿ ತತ್ವದ ಬೋಧ ಯಾರಿಗೆ ಗೊತ್ತ
ಬಾಬಾ ಅಂಬೇಡ್ಕರ ಹುಟ್ಟಿ ದೇವರ ತೋರಿರಿ ಸಾಕ್ಷಿ ॥ಪಲ್ಲ॥

---

೨೭. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು ಪು.೯

೨೮. ಅದೇ ಪು.೮

ಆದಿ ಅನಾದಿ ಅದರ ಆಚೆಗೆ ಶಬ್ದವೇನು ಇತ್ತ
ಬಾಬಾ ಅಂಬೇಡ್ಕರ ಹುಡುಕಿ ನೋಡಿದರ ಶಬ್ದ ಲೋಲ್ಪವಾದ
ಅಂಬೇಡ್ಕರ ದತ್ತ ತಿರುಗಿ ನಿಂತರ ನೆರಳ ತಂಪವದು
ಕ್ರಾಂತಿ ಪಾದಕ್ಕೆ ಬಾಗಿ ನಿಂತರ ಇದೇ ಪುಣ್ಯವಂತ ॥ ಆದ ಅನಾದಿ ॥

ಭಜನೆ ಎಂಬುದು ಬೆಂಕಿಯ ಕೆಂಡ ।
ಮಾನ್ಯರೆ ಹೇಳಿದ ಮಾತು
ಭಜನೆದೊಳಗ ನಕ್ಕನಲಿಬೇಡಿರಿ॥
ಹೇಳಿದ್ದು ಕೇಳಿರಿ ಚಿತ್ತ
ಭಕ್ತಿಯಿಂದ ಕುಳಿತು ಭಜನೆ ಮಾಡಿರಿ।
ನಿಮ್ಮ ಜೀವಕ್ಕೆ ಶಾಂತ
ಬಾಬಾ ಅಂಬೇಡ್ಕರ ಎಂದ ಅಂಕದಲ್ಲಿ
ಹಚ್ಚಿ ನೀಲ ಜೋತ ॥
ಕಣ್ಣಿನೊಳಗ ಕಣ್ಣೀರ ಬೇರ ಇರೊತವಂತ
ಶೋಧ ಮಾಡಿರಿ ಕುಳಿತು ।

ಬಾಬಾ ಅಂಬೇಡ್ಕರ ಬೇರೆ ಕಣ್ಣಿಂದ
ಬರೆದರ ಸಂವಿಧಾನ ಪಿತ ॥
ಬಾಬಾ ಅಂಬೇಡ್ಕರ ಕೂಗು
ಹೊಡೆದರೆ ಏಳಿರಿ ದಲಿತರಂತ
ಬಾಬಾ ಅಂಬೇಡ್ಕರ ತೀರಿ ಹೋದರಂತ
ಸುಳ್ಳ ಹೇಳಿತದರು ॥
ಹಗ್ಗ ಹಿಡಿದರು ಜೊಗ್ಗಿ ಜೋತ ಹೊಡೆದರೆ
ನಡಗಿತು ಆಕಾಶ
ಭಕ್ತಿಯಿಂದ ಕುಳಿತು ಭಜನೆ ಮಾಡಿದರೆ
ಬರತಾರ ಒಂದು ತಾಸಯೊಳಗೆ ॥
ಇಂಥ ಅಜ್ಞಾನಿಯೊಳಗೆ ಹುಡುಕಿ ನೋಡಿದರೆ
ಸಿಗದು ಯಾವ ಹೊತ್ತ ।
ಅಕ್ಕ ತಂಗಿಯರಿಗೆ ಅಣ್ಣ–ತಮ್ಮರಿಗೆ ಹುಡುಕಿರಿ ಶಾಂತಿ
ಮೊಟ್ಟ ಮೊದಲು ಮಾತು ದೇವರ ಪೂಜೆ ಬೀಡರೆಂದು
ಹೇಳಿ ಬಂದು ॥

ಒಂದೇ ಮಾತಿಗೆ ದೇವ ಪೂಜೆ ಬಿಟ್ಟು
ಅಗ್ಯಾರ ಶ್ಯಾಮರಸ ।
ದಸವಿದಿನ ಸಂಬಾಜಿ ಮಾನ್ಯಾಗ ಕುಂತು
ಭಜನಿ ಮಾಡರೆಲ್ಲಾ ಭಕ್ತಿಯಿಂದ ॥
ಧನ್ಯ ಧನ್ಯ ಬುದ್ಧದೇವ
ಭೀಮಾ ಮಾನ ಜನರೆಲ್ಲರಾ

ಭಜನೆ ಸಂಘ ಸಹವಾಸ ಬಯಸಿ ।
ನಿಂತರು ಭೀಮನಂತ
ಬಾನಿನ ಚಂದ್ರಕಾಂತ ಹೇಳತ್ತಾರ ನಿಮ್ಮದಾಸ
ಬಾಬಾ ಚಂದ್ರಕಾಂತ ಬುದ್ಧಿಕೋಡಿರಂತ ॥

ಬುದ್ಧಿವಂತರ ಸಹವಾಸ ಮಾಡೊ (ಮುದ್ರಾ)
ಬುದ್ಧಿಕೇಡಿಯ ಸಹವಾ ಬ್ಯಾಡೊ ॥
ಬುದ್ಧಿಕೇಡಿಯ ಸಂಘ
ಗೊಜ್ಜಿನೊಳಗೆ ಬಿದ್ದಾಂಗ
ಬಿದ್ದಾಂಗ ಬಿದ್ದು ಹೊದ್ದಾಡಿದಂಗ ॥ ಬುದ್ಧಿವಂತರ ಸಂಘ ॥

ಅಜ್ಞಾನಿಯ ಸಂಗ ಕತ್ತಲೊಳಗ ಕುಳಿತಂಗ
ಕತ್ತಲೊಳ ಸಹವಾಸ ಬಚ್ಚಲಹಂಗ
ಕತ್ತಲೊಳಗ ಕುರುಡ ಕೈ ಸವರಿದಂಗ ॥ ಬುದ್ಧವಂತರ ಸಂಘ ॥

ಧರ್ಮ ಧರ್ಮದೊಳಗೆ ಬೌದ್ಧ ಧರ್ಮ ಬಲುಚಂದಾ
ಬೌದ್ಧ ಧರ್ಮನಂಬಿ ಶುದ್ಧಾಗಿ ನಡಿಯರೆಂದ ॥ ಬುದ್ಧವಂತರ ಸಂಗ ॥

ದಾಸಮೌನರ ಕಂದ
ನಿಮ್ಮ ಸೇವೆಗೆ ಬಂದ
ಬುದ್ಧ ಧರ್ಮಕ್ಕೆ ಹೊಂದಿ
ಶುದ್ಧಾಗಿ ನಡಿಯೆರೆಂದ ॥ ಬುದ್ಧವಂತರ ಸಂಗ ॥[೨೯]

ತತ್ವಬೋಧವನ್ನು ಅನಾದಿಕಾಲದಿಂದಲೂ ಯಾರಿಗೆ ತಿಳಿಯಲಾರದನ್ನು ಅಂಬೇಡ್ಕರ ತೋರಿಸಿದರು ಶಬ್ದ ಹುಡಿಕಿ ನೋಡಿದರ ಶಬ್ದ ಮಾಯವಾಗುವುದು. ಭೀಮ ಬಾಬಾರ ನೆರಳಲ್ಲಿ ನಿಂತರ ಪುಣ್ಯ ಲಭಿಸುತ್ತದೆ. ಭಜನೆ ಎಂಬುದು ಬೆಂಕಿಯ ಕೆಂಡ ಇದ್ದಹಾಗೆ ಆತ್ನ ಶುದ್ಧಿಯ ಮಾರ್ಗ, ಪಾಪ ಸುಡುವ ಬೆಂಕಿ ಇದ್ದ ಹಾಗೆ ಇರುವ, ಭಜನೆಗೆ ಕಾಲಹರಣಕ್ಕಾಗಿ ಬರಬೇಡಿ ನಕ್ಕು ನಲಿಬೇಡಿರಿ. ಭಜನೆಯನ್ನು ಚಿತ್ತದಿಂದ ಕೇಳಿರಿ ಭಕ್ತಿಯಿಂದ ಕುಳಿತು ಭಜನೆ ಮಾಡಿದರೆ ನಿಮ್ಮ ಜೀವಕ್ಕೆ ಶಾಂತಿ ಸಿಗುತ್ತದೆ. ಭೀಮರು ಒಳಗಣ್ಣಿಂದ ಸಂವಿಧಾನ ಬರೆದರು. ಇವರ ಛಲಕ್ಕೆ ಆಕಾಶವೇ ನಡಗಿತು. "ಏಳಿರೀ ದಲಿತರೇ" ಎಂಬ ಕೂಗು ಅಂಬೇಡ್ಕರವರದು. ಬಾಬಾ ಸಾಹೇಬರು ತೀರಿಕೊಂಡಿಲ್ಲ ಇನ್ನೂ ಅವರು ಜೀವಂತ ನಮ್ಮ ಅಂತರಾಳದಲ್ಲಿ ಇದ್ದಾರೆ ಒಂದು ಗಂಟೆ ಭಕ್ತಿಯಿಂದ ಭಜನೆ ಮಾಡಿದರೆ ಬರುವರು ಎಂಬುದು ಭಾವುಕರ ನಂಬಿಕೆಯಾಗಿದೆ. ಜನಸಾಮ್ಯಾರ ಮುಗ್ಧತೆ, ಅವರ ಸ್ವಾಭಿಮಾನ ಭಕ್ತಿ ಇಲ್ಲಿ ಎದ್ದು ಕಾಣಿಸುತ್ತದೆ.

"ಸಂಘಕ್ಕೆ ಯಾವುದೇ ರೀತಿಯ ಆದ್ಯತ್ಮಿಕ ನಿಯಮಗಳಿರಲಿಲ್ಲ ಹಾಗೂ ಯಾವುದೇ ಆದರ್ಶಗಳಿರಲಿಲ್ಲ." [೩೦]

---

೨೯. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಕಮಲಮ್ಮ ಮು.ಧನ್ನೂರ ದಿ:೨೪–೦೮–೦೯ ರಂದು ಭೇಟ್ಟಿ

೩೦. ಡಾ.ಎ.ಎಂ.ರಾಜಶೇಖರಯ್ಯ (ಸಂ) ಡಾ.ಬಾಬಾ ಸಾಹೇಬ ಅಂಬೇಡ್ಕರ ಬರಹಗಳು ಮತ್ತು ಭಾಷಣಗಳು ಪು.೬೦೨, ಪ್ರ.ವ.೧೯೯೯.

ಅಜ್ಞಾನಿಯೊಳಗೆ ಹುಡುಕಿ ನೋಡಿದರೆ ಬಾಬಾ ಸಾಹೇಬರು ಎಂದು ಸಿಗುವುದಿಲ್ಲ. ನಮಗೆ ಶಾಂತಿ ಬೇಕೆಂದರೆ ಅಕ್ಕ ತಂಗಿಯರೇ ಮೊಟ್ಟ ಮೊದಲು ದೇವರ ಪೂಜೆ ಬಿಡಬೇಕು. ಬೌದ್ಧ ಪ್ರಾರ್ಥನೆ ಸ್ವೀಕರಿಸಬೇಕು. ಭೀಮರ ಒಂದೇ ಮಾತಿಗೆ ಪೂಜೆ ಬಿಟ್ಟು ಶಾಮರಸ ಉದ್ಧಾರ ಆಗಿದ್ದಾರೆ. ಭಜನೆ ಸಂಘ ಸಹವಾಸಿ ಬಯಸಿ, ಬುದ್ಧಿ ಕೊಡಿರಿ ಎಂದು ಪ್ರಾರ್ಥಿಸೋಣ ಬುದ್ಧಿಗೇಡಿಯ ಸಂಗ ಸಹವಾಸ ಬಚ್ಚಲದೊಳಗೆ ಇದ್ದು ಕತ್ತಲೊಳಗೆ ಕುರುಡ ಕೈ ಸವರಿದ ಹಾಗೆ ಆಗುತ್ತದೆ. ಬುದ್ಧಿವಂತರ ಸಹವಾಸ ಮಾಡಿ, ಬುದ್ಧಿಕೇಡಿಯ ಸಹವಾಸ ಬಿಡಬೇಕು. ಅಜ್ಞಾನಿಯ ಸಂಗ ಗೊಜ್ಜಿನೊಳಗೆ ಬಿದ್ದು ಒದ್ದಾಡಿದ ಹಾಗೆ

ಮಾಡಿ, ಬುದ್ಧಿಕೇಡಿಯ ಸಹವಾಸ ಬಿಡಬೇಕು. ಅಜ್ಞಾನಿಯ ಸಂಗ ಗೊಜ್ಜಿನೊಳಗೆ ಬಿದ್ದು ಒದ್ದಾಡಿದ ಹಾಗೆ ಇರುತ್ತದೆ. ಎಲ್ಲ ಧರ್ಮಗಳಲ್ಲಿ ಬೌದ್ಧ ಧರ್ಮ ಬಲು ಚಂದಾ, ಇದೇ ಒಂದೇ ಧರ್ಮಕ್ಕೆ ನಂಬಿ ಶುದ್ಧರಾಗಿರಿ ಎಂದು ಭಕ್ತಿ ಹಾಡಿನ ಮೂಲಕ್ಕೆ ಕರೆ ನೀಡಲಾಗಿದೆ.

"ಭೀಮ ದೇವರ ತೋಟ"

ಏಳಿರಿ ದಲಿತರೆ ಬನ್ನಿಬೇಗಹ ಓಡುತ
ನೀಲಂ ಕಲ್ಮಿ ಮಾವಿನ ಹಣ್ಣು ಭೀಮ ದೇವರ ತೋಟ ॥ ಪಲ್ಲ ॥

ನಂಬಿಗೆಂಬ ಭೂಮಿ ಇದೆ ಅಂಬೇಡಕರ ತೋಟ
ಗೌತಮ ಬುದ್ಧ ನೇಗಿಲ ಹೊಡೆದ ಹಸನಮಾಡಿ ಸ್ವಷ್ಟಾ
ವಿದ್ಯಾಬುದ್ಧಿಯ ಎತ್ತುಗಳು ಹೂಡ ಮಟ್ಟಿಕಟ್ಟಿ ನೇಟ
ಜ್ಞಾನದ ಕಣಿ ಹಗ್ಗ ಬಾಬಾ ಹಾರಿಸಿ ಬಿಟ್ಟ ॥ ಏಳಿರಿ ದಲಿತರೆ ॥

ಮಾವಿನ ತೋಟದ ಒಡೆಯ ರಾಮಜಿ ಬಾಬಾ ಶ್ರೇಷ್ಠ
ಬಾವಿ ತೋಟದ ಭಗವಾನ ಬುದ್ಧ ತಿಳಿ ನೀರ ಕೊಟ್ಟಾ
ಬಾಬಾ ಕೂಗಿ ಮಟ್ಟಿ ಹೊಡಿದ್ರೋ ನೋಡಿ ಬಡವರ ಕಷ್ಟಾ
ರಮಾಬಾಯಿ ನೀರುಣಸಿದಳೊ ಭೀಮಬಾಯಿ ತಂದೂ ಬಾ ॥ ಏಳಿರಿ ದಲಿತರೇ ॥

ಪೃಥ್ವಿ, ಆಪ, ತೇಜ, ವಾಯು, ಆಕಾಶ, ತೋಟಾ
ಪಂಚ ತತ್ವ ಮಾವಿನ ಮರಗಳು ಬೆಳೆಯಿರಿ ಬಲಿಷ್ಟ
ಮೇಘವರ್ಣ ನೀಲಮಕಾಯಿ ಫಲಾ ಹತ್ತಿ ರೇಟಾ
ಅಶೋಕ ಚಕ್ರ ಧಮ್ಮಾದಯಾ ಸಮ್ಮಾ ಸಮ್ಮಾ ತ್ರಿಪಿಟಾ ॥ ಏಳಿರಿ ದಲಿತರೆ ॥

ಭೀಮ ಬಾಬಾಗ ಚಿಂತಿ ಇತ್ರೋ ! ಎಂದಾದವು ಗಿಡನೇಟಾ
ಮಾವಿನ ತೋಟದ ಬಾರಾ ಮಾನವರಿಗೆ ಕೊಟ್ಟ
ಮಾವಿನ ತೋರಣ ಶಾಖಾ ನೀಲ ಪಂಚಶೀಲಾ ಬಾ ಊಟಾ
ನಾಗಪುರದೀಕ್ಷಾ ಭೂಮಿಗೆ ಮಾವಿನ ಹಣ್ಣ ರಸದೂಟ ॥ ಏಳಿರಿ ದಲಿತರೆ ॥ [೩೧]

ಇದೊಂದು ಸುಂದರವಾದ ರೂಪಕವಾಗಿದೆ. ಭೀಮರ ಕಾರ್ಯ ಸಾಧನೆಯನ್ನು ಮಾವಿನ ಹಣ್ಣಿನ ತೋಟಕ್ಕೆ ಹೋಲಿಸಲಾಗಿದೆ. ದಲಿತರೆ ಎದ್ದು ಬೇಗ ಓಡುತ್ತಾ ಬಂದು ಭೀಮದೇವರ ಮಾವಿನ ಹಣ್ಣು ತೋಟ ನೋಡಿರಿ. ಬುದ್ಧರು ತಮ್ಮ (ತತ್ವವನ್ನು) ನೇಗಿಲ ಹೊಡೆದು ಮನಸ್ಸನು ಹಸನ (ಸ್ವಚ್ಛ) ಮಾಡಿದ್ದಾರೆ.

---

೩೧. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು ಪು.೨

ವಿದ್ಯಾ ಬುದ್ಧಿ ಎಂಬ ಎರಡು ಎತ್ತುಗಳು ಹೂಡಿ ಜ್ಞಾನವ ಹರಿಸಿದ್ದಾರೆ. ಮಾವಿನ ತೋಟಕ್ಕೆ ಬುದ್ಧ ತಿಳಿ ನೀರ ಬಿಟ್ಟರು. ಬಾಬಾರು ಕೆಲಸ ಮಾಡಿ ಆಯಾಸಗೊಂಡಾಗ, ಉಣಿಸಲು ರಮಾಬಾಯಿ ಬಂದರು.

ಪಂಚಶೀಲ ತತ್ವಗಳಾದ ಪೃಥ್ವಿ, ಆಪ, ತೇಜ ವಾಯು, ಆಕಾಶ, ಎಂಬ ಮರಗಳು ಬೆಳೆಸಿರಿ ಈ ಗಿಡ ಎಂದು ಮರವಾಗುತ್ತದೆಂಬ ಚಿಂತೆ ಭೀಮರಿಗೆ ಇತ್ತು. ನಾಗಪೂರದಲ್ಲಿ ದೀಕ್ಷಾ ಪಡೆದರೆಎ, ಭೂಮಿಗೆ ಮಾವಿನ ಹಣ್ಣ ರಸದೂಟವಾಗುತ್ತದೆ. ಇಡೀ ಗೀತೆಯಲ್ಲಿ ಭೀಮರು ಬೌದ್ಧರ ತತ್ವ ಅರಿತು, ದಲಿತ ಉದ್ಧಾರದ ಮಾವಿನ ಗಿಡ ನೆಟ್ಟು ಮರವಾಗಲಿ ಎಂದು ಆಶಿಸಿದರು.

ದೀನದಲಿತರ ಪರಮಾತ್ಮನೇ
ಬುದ್ಧ ದೇವನೆ–ಭೀಮ ಬಾಬಾನೆ ॥ ಪ ॥ [೩೨]

ಪ್ರಸ್ತುತ ಹಾಡಿನಲ್ಲಿ ದೀನದಲಿತರ ಪರಮಾತ್ಮ ಬುದ್ಧ ಭೀಮ ಕುರಿತು– ಅಂಧಕಾರ ದೂರಮಾಡುವ ಜ್ಞಾನ ಜ್ಯೋತಿ ಸೂತ್ರನೆ, ಭಾರತೀಯರಿಗೆ ದೊರೆತಿರುವ ಜೀವ ಮಾರ್ಗದಾತನೇ, ದಲಿತರನ್ನು ಬೆಳಗಿಸುವಂತಹ ಮಹಾನ್ ದಿವ್ಯರತ್ನನೇ, ನ್ಯಾಯ ಮಾಡಲು ವಾದವಿವಾದದಿಂದ ಹಿಂಜರಿಯದ ಮಹಾತ್ಮ ಆಗಿದ್ದಾರೆ. ಬುದ್ಧರ ದರ್ಶನ ಮಾರ್ಗ ತೋರಿಸಿದವರು ಭೀಮ, ಬುದ್ಧ ಧರ್ಮದ ಸರಳ ಅರ್ಥ ತಿಳಿಸಿದರು. ಅರ್ಥಪೂರ್ಣ ಬದಲಾವಣೆ ಮಾಡಿ ಯುಗ ಪರಿವರ್ತಕ ಎಂದು ಅಭಿಮಾನದಿಂದ ಭೀಮರ ಬಗ್ಗೆ ಹೇಳಲಾಗಿದೆ.

ಭೋರ್ಗರೆಯುವ ಸಾಗರ ನೀರಿಗೆ ।
ತಡೆಯುವ ಶಕ್ತಿ ನೀನಾಗಿ ನಿಡಿದಾದೊ
ಮಿಂಚಿಗೆ । ಮಣಿಯದ ದಲಿತರ ಶಕ್ತಿ
ನಿನಗಾಗಿ ರಘುವೀರ ಭೀಮರ ।
ಪಾದ ಕಮಲ ಸೇರುವ ಹಾಡೊಂದು ನಾ
ಹಾಡುವೇನು ಜಯ ಭೀಮ ದೇವರಾ
ಕವಿತೆಯನ್ನು ಬರೆಯುವೆನು ಮಧುರ
ಭಾವದಲ್ಲಿ ॥ ಹಾಡೊಂದು ಹಾಡುವೇನು ॥ [೩೩]

ಭೋರ್ಗೆರೆಯು ಸಾಗರ ನೀರಿಗೆ ತಡೆಯುವ ಶಕ್ತಿಯೆಂದರೆ ದಲಿತರ ಪರವಾಗಿ ಶೋಷಣೆ, ಅನ್ಯಾಯವನ್ನು ಎದುರಿಸುವ ಪ್ರಕೃತಿದತ್ತವಾದ ಶಕ್ತಿಯಾಗಿದೆ. ಬುದ್ಧ–ಭೀಮರ ಪಾದ ಕಮಲ ಸೇರುವ ಹಾಡೊಂದು ನಾನು ಹಾಡುವೆನು ಮಧುರ ಭಾವದಲ್ಲಿ ಜಯ ಭೀಮ ದೇವರಾ ಕವಿತೆಯನ್ನು ಬರೆಯುವೆನು ಎಂದು ಹಾಡಿನ ಮೂಲಕ ಭೀಮರ ಘನತೆಯನ್ನು ಚಿತ್ರಿಸಲಾಗಿದೆ.

ಓ ನಮ್ಮ ದಾತನೇ ನಮ್ಮ ದೇವನೇ
ಏಕೆ ನಮ್ಮ ಬಿಟ್ಟಿದೆ । ಮತ್ತೆ ಮರಳಿ ಬಾರದೆ
ನಿನ್ನಿಂದ ನಾವು ಇಂದು । ಮನುಷ್ಯರಾದೇವೂ
ಓ ನಮ್ಮ ದಾತನೇ । ನೀ ನಮ್ಮ ದೇವನೇ

---

೩೨. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು ಪು.೩

೩೩. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಆರತಿ ಮು.ಮಂಠಾಳ, ಬೀದರ, ದಿ:೧೫-೦೭-೦೯ ರಂದು ಭೇಟಿ.

ಹೆತ್ತ ತಾಯಿ ತಂದೆಗಳನ್ನ। ಮರೆತು ಬಾಳಲು
ಬಹುದು ನಿನ್ನಂತಹ ದಾತನನ್ನು ಮರೆತು
ಬಾಳಲಾಗದು
ಕಾರಣ ನಿನ್ನ ಸಾಧನೆ । ಮನುಲೋಕದ ಅಮೃತನೇ
ಬಡಜನರ ಪಿತನೇ ದೇಶಮಾನ ರಕ್ಷಕನೇ
ಓ ಭೀಮಾ । ರಾಮ ಕಂದನೆ ॥ ಓ ನಮ್ಮ ದಾತನೆ ॥ [೩೪]

ನಮ್ಮ ದಾತನೇ ಎಂದರೆ ಇಲ್ಲಿ ದಾತ ಎಂಬ ಪದದ ಅರ್ಥವು 'ಒಡೆಯ' ದೊರೆ "ಸ್ವಾಮಿ" ಎಂಬುದಾಗಿದೆ. ಭೀಮ ಅಗಲಿಕೆಯ ಬಗ್ಗೆ ಈ ಹಾಡಿನಲ್ಲಿ ಪ್ರಸ್ತಾಪಿಸಲಾಗಿದೆ. ನಮಗೆ ಮಾರ್ಗ ತೋರಿಸಿ ನಮ್ಮಿಂದ ಅಗಲಿದ್ದಿಯಾ? ಮತ್ತೆ ಮರಳಿ ಬಾ ಎಂದು ಭೀಮರಿಗೆ ಪ್ರಾರ್ಥಿಸಲಾಗಿದೆ. ತಂದೆ-ತಾಯಿಯನ್ನು ಮರೆತರೂ ನಿನ್ನನ್ನು ಮರೆತು ಬಾಳಲಾರೆವು ಎಂದು ಅಪಾರ ಭಕ್ತಿಯನ್ನು ವ್ಯಕ್ತಪಡಿಸಲಾಗಿದೆ. ಕಸಕ್ಕಿಂತ ಕೀಳಾಗಿ ಕಾಣುತ್ತಿದ್ದ ನಮ್ಮನ್ನು ಮನುಷ್ಯರಾಗಿ ಮಾಡಿದ್ದಿಯಾ ? ನಿನ್ನ ಸಾಧನೆಯೇ ಮನುಲೋಕಕ್ಕೆ ಅಮೃತದಂತಿದೆ. ದೇಶ ಮಾನ ರಕ್ಷರಾಗಿದ್ದಾರೆ. ಎಂದು ಬಾಬಾ ಸಾಹೇಬರ ಬಗ್ಗೆ ಅಭಿಮಾನ ಘನತೆ ವ್ಯಕ್ತಗೊಂಡಿದೆ.

ಭಾರತ ನಕಾಶೆಯನ್ನು ಹಾಕಿಲ್ಲ ಇನ್ನು
ಪರದೇಶದ ಜನರು ಹೊಂಟಾರೊ ಮುನ್ನ
ಜೈ ಭೀಮ ತಂದೆ ಹಾಕಿ ಪಡೆದಾರೊ ಹೊನ್ನು ॥ ಮಕ್ಕಳು ॥

ಚಿಲ್ಲರ್ಗಿ ಊರಲ್ಲಿ ಬುದ್ಧ ಪ್ರಭು ದೇವರಲ್ಲಿ
ನಿಮ್ಮ ಅಂತರಂಗದಲ್ಲಿ ಭೀಮ ತಂದೆ ಆತ್ಮದಲ್ಲಿ
ಬಾಬರ ಪದ್ಯ ಹಾಡಿ ದಲಿತರು ನಲಿಯಲಿ ॥ ಮಕ್ಕಳು ॥ [೩೫]

ಇಲ್ಲಿ ಮಕ್ಕಳು ಭೀಮ ದೇವರ ಮುಂದೆ ನಿಂತು ಪ್ರಾರ್ಥಿಸುವ ರು. ಭಾರತ ನಕಾಶೆಯಲ್ಲಿ ಇನ್ನು ಗಡಿರೇಖೆಯಲ್ಲಿ ಈ ಸಂದರ್ಭದಲ್ಲಿ ಭೀಮಬಾಬಾ ಚಾಣಕ್ಷತನ ತೋರಿಸಿದರು. ಂಲ್ಲರ್ಗಿ ಊರಲ್ಲಿ ಬುದ್ಧ ಪ್ರಭು ದೇವರು ಇದ್ದಾರೆ. ನಮ್ಮ ಅಂತರಂಗದಲ್ಲಿ ಭೀಮ ತಂದೆ ಹಾಗೂ ಆತ್ಮದಲ್ಲಿ ಬಾಬಾರ ಪದ್ಯ ಹಾಡಿ ನಾವು ದಲಿತರು ಪಾವನ ಆಗೋಣಾ ಎಂದು ದಲಿತರಿಗೆ ಕರೆ ನೀಡಲಾಗಿದೆ.

"ಓ ಭೀಮಾ ಓ ಭೀಮಾ
ಉದಯಿಸಿ ಬಾ ಇನ್ನೊಮ್ಮೆ
ಶಾಶ್ವತ ನಿನ್ನಯ ನಾಮಾ । ಬೆಳಕಲಿ ತಂದಿದಿ
ನಮ್ಮ - - - - ॥ ಓ ಭೀಮಾ ॥ [೩೬]

ಕತ್ತಲಲ್ಲಿ ಇದ್ದ ದಲಿತರನ್ನು ಬೆಳಕಿಗೆ ತಂದರು ನಿಮ್ಮ ಅಗಲಿಕೆ ಕಾಡುತ್ತದೆ. ಅದಕ್ಕಾಗಿ ಇನ್ನೊಮ್ಮೆ ಹುಟ್ಟಿ ಬಾ ಎಂದು ಕೋರಲಾಗಿದೆ. ಬಾಬಾ ಸಾಹೇಬರ ಹೆಸರು ಇಂದು ಶಾಶ್ವತವಾಗಿ ಉಳಿದಿದೆ. ನೊಂದು ಬೆಂದು ಕಷ್ಟ ಅನುಭವಿಸಿ ಜ್ಞಾನ ದೊರಕಿಸಲು ನಿರಂತರರ ಹೋರಾಡಿದ ಭೀಮರು ನಿಜಕ್ಕೂ ಶತ ಶೂರರಾಗಿದ್ದಾರೆ ಎಂದು ಅವರ ಶೂರತನವನ್ನು ವರ್ಣಿಸಲಾಗಿದೆ.

---

೩೪. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಆರತಿ ಮು.ಮಂಠಾಳ, ಬೀದರ, ದಿ:೧೫-೦೬-೦೯ ರಂದು ಭೇಟಿ.

೩೫. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳುಕ ಪು.೯

೩೬. ಅದೇ ಪು. ೮

ಬುದ್ಧ ಭೀಮ ದೇವ ನಿನ್ನ ನಾಮ
ಹಗಲಿರಳುಮಾಡುವಿ ನಿಮ್ಮ ಧ್ಯಾನ ॥ ಪಲ್ಲ ॥
ಬುದ್ಧನ ಆತ್ಮದಲ್ಲಿ ಐಕ್ಯಾ ಆದಿ ನೀನ
ಸರ್ವ ಆತ್ಮದಲ್ಲಿ ಭೀಮ ಬಾಬ ಲೀನ ॥ ಬುದ್ಧ ಭೀಮ ॥ [೩೭]

ಇಲ್ಲಿ ಬುದ್ಧ–ಭೀಮ ದೇವರ ಬಗ್ಗೆ ಭಕ್ತಿಯನ್ನು ವ್ಯಕ್ತಿಸಲಾಗಿದೆ. ನಾವು ನಿಮ್ಮ ಧ್ಯಾನದಲ್ಲಿ ಹಗಲಿರುಳು ಮಾಡುವೆವು ಬುದ್ಧನ ಆತ್ಮದಲ್ಲಿ ಭೀಮರು ಲೀನರಾದರು ಹಾಗೆ, ಸರ್ವರ ಆತ್ಮದಲ್ಲಿ ಭೀಮ ಬಾಬರು ಲೀನರಾಗಿದ್ದಾರೆ. ಪುನಃ ಹುಟ್ಟಿ ಬಂದು ಚೇಡ ಬಡವರಿಗೆ ವಿದ್ಯೆಯ ದಾನ ಮಾಡೊ, ನಿನ್ನ ನಾಮ ತುಂಬಾ ಸುಂದರ ಅದನ್ನು ನೆನೆಸಿದರೆ ಮನ ದುಷ್ಟದಿಂದ ಕರಗಿ ಸವಿ ಜೇನು ಆಗುತ್ತದೆ. ನಿಮ್ಮ ದಾರಿ ನೋಡಿ ಬಡ ಜನ ರಾತ್ರಿ ಹಗಲು ನಿಮ್ಮ ಧ್ಯಾನ ಮಾಡುತ್ತಿದ್ದಾರೆ. ಎಲ್ಲ ಹುಡುಕಬೇಕು ಭೀಮ ದೇವರೇ ನನ್ನ ಕನಸಿನಲ್ಲಿ ಬಂದು ನಿಮ್ಮ ರೂಪ ಮನಕ್ಕೆ ನೀಡಿತು ಶಾಂತಿ, ಎಷ್ಟು ಹೊಗಳಲಿ ತಂದೆ ನಿನ್ನ ಎಂದು ದಲಿತರ ಭಕ್ತಿ ಮೇಲಿನ ಹಾಡಿನಲ್ಲಿ ಮೂಡಿ ಬಂದಿದೆ.

ನೀಲ ಧ್ವಜ ಹಿಡಿದು ನಾವು ಒಟ್ಟು ಕೂಡಿ
ಭೇದ ಭಾವವನ್ನು ಪುಡಿ–ಪುಡಿ ಮಾಡಿ
ದಲಿತರ ಬಿಡುಗಡೆ ನಾಗಪೂರಕ್ಕೆ ನೀವು ನಡೆ
ನಾಗಪುರಕ್ಕೆ ನೀವು ನಡೆ–ದಲಿತರ ಬಿಡುಗಡೆ
ಭೀಮ ಬಾಬರ ಪದ್ಯವು ಹಾಡಿ ॥ ಬುದ್ಧನ ಆತ್ಮದಲ್ಲಿ ॥ [೩೮]

ಭೀಮರ ತತ್ವದ 'ಸಂಘಟನೆ' ಸಾಕಾರಗೊಳಿಸಲು ನಾವು ದಲಿತರು ನೀಲ ಧ್ವಜ ಹಿಡಿದು ಒಗ್ಗಟ್ಟು ಆಗೋಣಾ ಹಾಗೆ ಭೀಮ ಬಾಬರ ಪದ್ಯವನ್ನು ಭಕ್ತಿಯಿಂದ ಹಾಡೋಣಾ ಬುದ್ಧ ಮಂತ್ರವು ವಿಶ್ವಶಾಂತಿಗೆ ಮೂಲ ಮಂತ್ರವಾಗಿದೆ. ದಲಿತರೆಲ್ಲರೂ ಒಂದೇ ಎಂದು ಬುದ್ಧ ಭೀಮನ ಸ್ತೋತ್ರ ನುಡಿಯಬೇಕು. ಮಹಾಮಂತ್ರ ನುಡಿಯೋಣಾ ಎಂಬ ಏಕತೆಯ ಭಾವ ಮೇಲಿನ ಹಾಡು ಒಳಗೊಂಡಿದೆ.

ಭಗವಾನ ಬುದ್ಧ ಜಗದೊಳಗೆ ಎದ್ದ
ಭೂಲೋಕವೆಲ್ಲ ಬೆಳಗಾಗಿ ಎದ್ದ
ಚೇಡ–ದಿನ ದಲಿತರೆಲ್ಲ ಎಚ್ಚರವಾಗಿರೆ ಭೀಮಬಾಬ
ಬಂದು ಕರೆಯುತ್ತಿದ್ದಾರೆ ॥ ಪಲ್ಲ ॥

ದಸರಾ ಬಂದ ಎಚ್ಚರ ಇಂದ
ನಾಗಪುರ ದೀಕ್ಷ ಭೂಮಿಯು ಅಂದ
ವಿಜಯ ದಶಮಿ ನಾವು ವಿಜಯದಿಂದ
ಹೋಗೋಣ ಬನ್ನಿ ಬಾಬರ ದರ್ಶನಕ್ಕೆಂದ ॥ ಭಗವಾನ ಬುದ್ಧ ॥ [೩೯]

ಜಗದಲ್ಲಿ ಭಗವಾನ ಬುದ್ಧ ಬಂದು ಭೂಲೋಕವೆಲ್ಲ ಶುದ್ಧ ಬೆಳಕನ್ನು ಹರಿಸಿದರು. ಭೀಮ ಬಾಬ ಆ ಬೆಳಕನ್ನು ಕಂಡಿದ್ದರು. ನಮಗೆ ಆ ಬೆಳಕನ್ನು ತೋರಿಸಲು ಕರೆಯಕುತ್ತಿದ್ದಾರೆ. ದೀನ–ದಲಿತರೇ ಎಚ್ಚರವಾಗಿರಿ.

---

೩೭. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳುಕ ಪು.೧೧
೩೮. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಗೀತೆಗಳು ಪು.೧೦
೩೯. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಜಯಶ್ರೀ ಮು.ಚಿಟಗುಪ್ಪಾ ದಿ:೨೯–೦೭–೦೯ ರಂದು ಸಂದರ್ಶನ

ಬೌದ್ಧ ಧರ್ಮಕ್ಕೆ ನಂಬಿ ಶುದ್ಧನಾಗು
ನಮ್ಮನ್ನೇ ಅವಲಂಬಿಸಿ ನಮ್ಮ ಬಾಬಾ
ನುಡಿದಂತೆ ನೀನು ನಡೆಯುವಂತೆ ನಾಗು ॥ ಪಲ್ಲ ॥

ಜಗವೆಲ್ಲಾ ನಿನ್ನಲ್ಲಿ
ನಿನ್ನಲ್ಲೆ ಜಗವು
ನಿನ್ನಂದಲೇ ಭವಸಾಗರ
ಭವ ಸಾಗರದ ಮಹಿಮೆ ಅರಿಯದೆ
ನಿಮ್ಮನ್ನೆಸ್ಮರಿಸುವುದು ಜಗವೆಲ್ಲಾ
ನೀನು ನಮ್ಮ ಬೆರೆತರೆ ಮಾತ್ರ
ನಡೆಯುವುದು ಜೀವನದ ಸೂತ್ರ [೪೦]

ಇಲ್ಲಿ ಮಾನವನ ಶುದ್ಧತೆ ಮೌಲ್ಯವನ್ನು ಕುರಿತು ಆತ್ಮ ಶುದ್ಧ ಪಡೆಯಲು ಬೌದ್ಧ ಧರ್ಮವನ್ನು ನಂಬಬೇಕು. ನಮ್ಮ ಏಳಿಗೆಗಾಗಿ ಜೀವನ ಪರ್ಯಂತ ಹೋರಾಡಿದ ಬಾಬಾ ಭೀಮರು ಅವರ ವಿಶ್ವಾಸಕ್ಕೆ ಧಕ್ಕೆ ಬರದಂತೆ ನಾವು ನುಡಿದಂತೆ ನಡೆಯಬೇಕು. ಜಗದ ಚಿಂತೆ ನಿನ್ನಲ್ಲಿದೆ, ನಿನ್ನಲ್ಲೇ ಇಡೀ ಲೋಕ ಕಾಣುತ್ತದೆ. ಭವಸಾಗರವೇ ನಿನ್ನಲ್ಲಿ ಒಳಗೊಂಡಿದೆ. ನೀನು ನಮ್ಮಲ್ಲಿ ಬೆರೆತರೆ ಮಾತ್ರ ನಮ್ಮ ಜೀವನದ ಸೂತ್ರ ಸರಳವಾಗಿ ನಡೆಯುವುದು. ಸತ್ವದ ಮರ್ಮ ಅರಿಯದೆ ಇರುವನಿಗೆ ಅಜ್ಞಾನ ಅಂಧಕಾರವಾಗುತ್ತದೆ. ನಿನ್ನ ಹೊರತು ಬೇರೆ ಯಾವ ದೇವರಿಲ್ಲ. ಬೇರೆ ಧರ್ಮಕ್ಕೆ ಮರುಳಾಗಬೇಡ ಧೈರ್ಯವಾಗಿ ದುಡಿಯದಿದ್ದರೆ ನಿಮ್ಮ ಹೊಟ್ಟೆಯ ಗೋಳು ಯಾರು ಕೇಳುವುದಿಲ್ಲ ಎಂದು ಅಲಸ್ಯ ದಲಿತರನ್ನು ಕುರಿತು ಹೇಳುತ್ತಾರೆ. ಭಗವಾನ ಬುದ್ಧರಿಗೆ ಭವಿಷ್ಯ ಜ್ಞಾನ ಇತ್ತು. ಈ ನಿಜ ಅರಿತು ನೀನು ಬುದ್ಧರಿಗೆ ಶರಣ ಆಗು. ಸತ್ಯಶೀಲದಿಂದ ಕರುಣಾಮಯಿ ತತ್ವವರಿತನಾಗು. ನಿನ್ನ ಭವಿಷ್ಯದ ಭವ್ಯ ಜೀವನಕ್ಕಾಗಿ ಎಂದು ಹೇಳಿದ್ದಾರೆ.

ಬುದ್ಧನ ಖರೆ ಭಕ್ತ ಡಾ. ಅಂಬೇಡ್ಕರ
ಮಾಡ್ಯಾರ ಅವರು ಎಲ್ಲಾ ಜನರಿಗೆ ಉದ್ದಾರ ॥ ಪ ॥

ಸಂವಿಧಾನ ಬರೆದಾರ ಅವರು ದೇಶಕ ಉಳಿಸ್ಯಾರ ॥ ೧ ॥
ದೇಶಕ ಉಳಿಸ್ಯಾರ ದೇಶದಲ್ಲಿ ಮೆರದಾರ ॥ ಬುದ್ಧನ ಖರೆ ॥
ಮಹಾಡ ಕೆರೆಯಲ್ಲಿ ಅವರು ನೀರು ಕುಡಿದಾರ
ಅವರು ಕುಡಿದಾರ ಎಲ್ಲಾ ಜನರಿಗೆ ಕುಡಸ್ಯಾರ ॥ ಬುದ್ಧನ ಖರೆ ॥
ನಾಗಪುರಕ್ಕೆ ಹೋಗ್ಯಾರ ಅವರು ದಿಕ್ಷಾ ಪಡೆದಾರ
ದೀಕ್ಷಾ ಪಡೆದಾರ ಎಲ್ಲರ ಉದ್ಧಾರ ಮಾಡ್ಯಾರ ॥ ಬುದ್ಧನ ಖರೆ ॥ [೪೧]

ಚೆನ್ನಪ್ಪ ಚೆನ್ನಗೌಡ ಎಂಬ ಪ್ರಸಿದ್ಧ ಜನಪದ ಹಾಡಿನ ರಾಗದಿಂದ ರಚಿತವಾದ ಮೇಲಿನ ಹಾಡಿನಲ್ಲಿ ಡಾ. ಅಂಬೇಡ್ಕರರು ಬುದ್ಧನ ನಿಜ ಭಕ್ತರಾಗಿದ್ದಾರೆ ಎಂದು ಹೇಳಲಾಗಿದೆ. ಅವರು ಸಂವಿಧಾನ ಬರೆದು ದೇಶಕ್ಕೆ ಉಳಿಸಿ, ಪ್ರಸಿದ್ಧರಾಗಿದ್ದಾರೆ. ಮಹಾಡ ಕೆರೆಯಲ್ಲಿ ನೀರು ಕುಡಿದು ಸಮಾನತೆ, ನೀಡಲು ಪ್ರಯತ್ನಸಿದರು. ಭೀಮ ಬಾಬಾ ಸಾಹೇಬರು ನಾಗಪುರಕ್ಕೆ ಹೋಗಿ ಬೌದ್ಧ ದೀಕ್ಷೆ ಪಡೆದು ಎಲ್ಲ ದಲಿತರಿಗೂ ಉದ್ಧಾರ ಮಾಡಿದ್ದಾರೆ ಎಂದು ಅವರ ಕಾರ್ಯಸಾಧನೆ ಕುರಿತು ಹೇಳಲಾಗಿದೆ.

---

೪೦. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಜಯಶ್ರೀ ಮು.ಚಿಟಗುಪ್ಪಾ ದಿ:೨೯-೦೭-೦೯ ರಂದು ಸಂದರ್ಶನ
೪೧. ಕ್ಷೇತ್ರ ಕಾರ್ಯದಲ್ಲಿ ವಕ್ತಾರರು ಆರತಿ ಮು. ಮಂಠಾಳ ದಿ: ೧೫-೦೭-೦೯ ರಂದು ಭೇಟಿ.

ಬಾಬಾ ಸಾಹೇಬ ಭರತ ಮೂಲಕ
ಸುಳ್ಳ ಅಲ್ಲರಿ ಪೂರ್ವಕ ॥ ಪ ॥

ತೊಕೊಂಡು ಬಿಟ್ಟಾರು ಬಾಬಾನ ಹಕ್ಕ
ಸುಳ್ಳ ಅಂತ ಬರದಾರ ಬಿಟ್ಟ
ಅದರ ಮೇಲೆ ಸರ್ಕಾರ ಸಿಕ್ಕ
ಓದಿ ಕೊಳ್ಳಿರಿ ನೀವು ಸದ್ಯಕ ॥ ಬಾಬಾ ಸಾಹೇಬ ॥

ಶಾಲಿ ಕಂತಿಲ್ಲ ನಾವು ಹಿಂದಕ
ವಿದ್ಯಾ ಎಂಬುದು ದೊಡ್ಡದ ಎಲ್ಲರಾ
ಸ್ವರ್ಗಿದಾರು ಬಾಬಾ ಸದ್ಯಕ ಅವರಿಂದ
ನಮಗೆಲ್ಲಾ ಸುಖ ॥ ಬಾಬಾ ಸಾಹೇಬ ॥
ಭೊಲೋ ಭೀಮ ಭಗವಾನಕೀ ಜೈ
ಭೊಲೋ ಬುದ್ಧ ಭಗವಾನಕೀ ಜೈ [೪೨]

ಬಾಬಾ ಸಾಹೇಬರು ಭಾರತ ಸಂವಿಧಾನದ ಮಾಲಕರಾಗಿದ್ದಾರೆ. ನಾವು ಎಲ್ಲರೂ ವಿದ್ಯೆ ಪಡೆಯಬೇಕು. ಇಲ್ಲವಾದರೆ ಈ ಚಿಂತೆಯಿಂದ ಅವರು ಆರೋಗ್ಯ ಕೆಡಿಸಿಕೊಂಡಿದ್ದಾರೆ. ನಾವು ಮೀಸಲಾತಿ ಹಂಚಿಕೆಯಲ್ಲಿ ಜಾಗೃತರಾಗಬೇಕು ಎಂದು ಮೇಲಿನ ಹಾಡಿನಲ್ಲಿ ತಿಳಿಸಲಾಗಿದೆ.

ಬರತಾಳ ಸೀರಿಉಟ್ಟು
ಒಂಬತ್ತು ನೀರಿಗೆ ಬಿಟ್ಟು
ವೋಟಿಗೆ ಬಂದ ನಿಂತ್ಯಾಳ
ಇದೇ ಭಾರತದಿಂದ ಇದೇ
ತಾಲ್ಲೂಕದಿಂದ ಹುಟ್ಯರ ಜೈ ಭೀಮ
ನೆಹರೂನ ಮಗಳು ಇಂದಿರಾಗಾಂಧಿ ಅಂತಾ
ವೋಟಿಗೆ ಬಂದ ನಿಂತಗಾ ॥ ಪ ॥
ಊರೂರಿಗೆ ರಾಷನ್ ಇಲ್ಲಂದರ
ರಾಷನ್ ಮಾಡಿಸಿಕೊಟ್ಟ
ಇದೇ ಭಾರತದಿಂದ
ಇದೇ ತಾಲ್ಲೂಕದಿಂದ ಹುಟ್ಯಾರ ಜೈಭೀಮ
ನೆಹರೂನ ಮಗಳು ಇಂದಿರಾಗಾಂಧಿ ಅಂತಾ
ವೋಟಿಗೆ ಬಂದ ನಿಂತಾ ।

ಹೂರ ಊರಿಗೆ ಕರೆಂಟ ಇಲ್ಲಂದರ
ಜ್ಯೋತಿಯು ಹಾಕಿಸಿಕೊಟ್ಟ ॥ ಇದೇ ಭಾರತದಿಂದ ॥

ಊರೂರಿಗೆ ನೀರ ಇಲ್ಲಂದರ
ಬೋರಲ್ ಹಾಕಿಸಿಕೊಟ್ಟ ॥ ಇದೇ ಭಾರತದಿಂದ ॥

---

೪೨. ಕ್ಷೇತ್ರ ಕಾರ್ಯದಲ್ಲಿ ವಕ್ತಾರರು ಆರತಿ ಮು. ಮಂತಾಳ ದಿ: ೧೫-೦೭-೦೯ ರಂದು ಭೇಟಿ.

ಕುಂಟ ಕುರುಡರಿಗೆ ದಿಕ್ಕ ಇಲ್ಲಂದರ
ರೊಕ್ಕ ಮಾಡಿಸಿಕೊಟ್ಟ ॥ ಇದೇ ಭಾರತದಿಂದ ॥ [೪೩]

ಪ್ರಸ್ತುತ ಹಾಡಿನಲ್ಲಿ ಭೀಮ ಬಾಬಾರಲ್ಲಿ ಒಬ್ಬ ರಾಜಕಾರಣಿಗೆ ಇರಬೇಕಾದ ಎಲ್ಲ ಗುಣಗಳು ಇದ್ದರೂ ಸಹ ಎಂದು ರಾಜಕೀಯ ಪ್ರವೇಶಿಸಲು ಬಯಸಲಿಲ್ಲ ನೆಹರೂ ಮಗಳು ಇಂದಿರಾಗಾಂದಿ ವೋಟಿಗಾಗಿ ಬಂದು ನಿಂತಿದ್ದಾಳೆ. ಇವಳಿಗಿಂತ ಹೆಚ್ಚಾಗಿ ಅಂಬೇಡ್ಕರರು ರಾಷನ್ ವ್ಯವಸ್ಥೆ, ವಿದ್ಯುತ್, ಬೋರಲ್ ಹಾಕಿಸಿಕೊಟ್ಟರು. ಅಂಗವಿಕಲರಿಗೆ ಮಾಶಾಸನ ಮಾಡಿಸಿಕೊಟ್ಟರು ಎಂದು ಅವರ ಸಾಧನೆಯನ್ನು ವಿವರಿಸಿದರು. ಇಂದಿರಾಗಾಂಧಿ ಮತ್ತು ಬಾಬಾ ಸಾಹೇಬರ ಸಾಧನೆಗಳನ್ನು ತೌಲನಿಕವಾಗಿ ವಿಮರ್ಶಿಸಲಾಗಿದೆ.

ಭಾರತದಲ್ಲಿ ಬಾಬ ಬಂದರೋ
ಬಡವರಿಗೆ ಭಾಗ್ಯ ತಂದಾರೋ ॥ ಪ ॥

ಮಹಾಡಿದ ಸತ್ಯಗ್ರಹ ಮುಗುಸ್ಯಾರೋ
ಬೌದ್ಧರ ಕೆರೆ ನೀರು ಕುಡುಸ್ಯಾರೊ
ಬಡವರ ಬಿಟ್ಟ ಬಿಡುಸ್ಯಾರೊ
ಅಂಗ್ರೇಜ್ ಬಿಟ್ಟ ತೊಡುಸ್ಯಾರೋ ॥ ಭಾರತದಲ್ಲಿ ಬಾಬ ॥ [೪೪]

ಭಾರತದ ಸಂವಿಧಾನ ಶಿಲ್ಪ ಡಾ. ಅಂಬೇಡ್ಕರರು ಬಡವರಿಗೆ ಭಾಗ್ಯ ತೆರೆದಿದ್ದಾರೆ. ಐದು ವರ್ಷ ನಾಸಿಕ ಸತ್ಯಕಾಗ್ರಹ ೧೯೩೫ ಇಸ್ವಿಯಲ್ಲಿ ಕಾಳಾರಾಮ ಮಂದಿರ ದಲಿತರಿಗಾಗಿ ತೆರೆಸಿದ್ದಾರೆ. ಬಡವರ ಧರ್ಮ ಬಂಧನ ಬಿಡಿಸಿದ್ದಾರೆ ಎಂದು ಅವರ ಕಾರ್ಯವನ್ನು ವಿವರಿಸಿದ್ದಾರೆ.

ಬರೆದಿದೆಯೋ ಸಂವಿಧಾನ ಭೀಮರಾಯ. . . .
ಭಾರತ ಸಲುವಾಗಿ ಬರೆದಿದೆಯೋ ಘಟನಾ ॥ ಪಲ್ಲ ॥
ರಾತ್ರಿ ಹಗಲಾ ನಿದ್ರೆ ಮಾಡಲಿಲ್ಲ
ನಿನಗಿದು ಚಿಂತೆಯು ತೋರಾ ಆ _ _ ಆ _ _ ಆ _ _
ಭಾರತ ಬಡವರ ಕಲ್ಯಾಣಕ್ಕಾಗಿ
ನಿನ್ನ ಆತ್ಮಿಕ ಅನುತಾಪ ಭೀಮರಾಯ

ಘಟನವ್ವು ಮುಗಿಸಿ, ರಾಜಕಾರಣ ನಿಲ್ಲಿಸಿ
ಬಾವನ್ ರಾಜರನ್ನು ಕರಿಸಿ ಆ _ _ ಆ _ _
ರಾಜೇಂದ್ರ ಪ್ರಸಾದ್, ನೆಹರು–ಗಾಂಧೀಜಯ
ಪ್ರಮಾಣ ಮಾಡಿಸಿ, ನೀಡಿದಿಯೋ ಭೀಮರಾಯ

ಮೊದಲಿತ್ತೋ ಚರಖಾ ತಿರಂಗಿ ಧ್ವಜಕಾ
ಬಾಬನೆ ಕಿತ್ತಿ ಒಗೆದನು ಚರಖಾ ಆ _ _ ಆ _ _
ಅಶೋಕ ಚಕ್ರ ನಡುವಿಗಿಟ್ಟಾ ಬೌದ್ಧ ಕಳಸಕಾ
ರೊಕ್ಕ–ನೋಟಿಗೆ ಅಶೋಕನ ಸಿಕ್ಕಾ

---

೪೩. ಕ್ಷೇತ್ರ ಕಾರ್ಯದಲ್ಲಿ ಹಾಡಿದರು ಲಕ್ಷ್ಮೀ ಬಾಯಿ ಮು.ಬರ್ಗಿಪುರ ದಿ.೨೦-೦೭-೦೯ ರಂದು ಭೇಟಿ
೪೪. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು ಪು.೪

ಸರ್ವ ಜನರೆಲ್ಲ ಸ್ವತಂತ್ರವಾಗಿ ಭಾರತ ಬಂಧು ಒಂದಾಗಿ
ಭಾರತ ಬಂಧು ಒಂದಾಗಿ ಆ _ _ ಆ _ _
ವಂದೆ ಮಾತರಂ ಅನಸಿದ ಯೋಗಿ
ಬಂದಿನಾ ಭಾರತ ಬೌದ್ಧ ಧರ್ಮ

ಪ್ರತಿಯೊಬ್ಬರೋದಿರಿ ಬೌದ್ದಿಷ್ಟರಾಗಿರಿ
ಬಾಬನ ಯೋಜನಕ ತಿಳಿಯಿರಿ ಆ _ _ ಆ _ _
ಹೆಣ್ಣು –ಹೊನ್ನು – ಮಣ್ಣು ಮೂರು ಸಮತೂಕ ಮಾಡಿರಿ
ಕಾಶಿನಾಥ ಕವಿಯ ಕಾಪಾಡು ಭೀಮರಾಯ [೪೫]

ಪ್ರಸ್ತುತ ಹಾಡಿನಲ್ಲಿ ಬಾಬಾ ಸಾಹೇಬರ ಕಾರ್ಯ ಕುರಿತು ಭೀಮರು ಆತ್ಮಿಕ ತಾಪ ನೀಡಿ, ರಾತ್ರಿ-ಹಗಲು ನಿದ್ರೆ ಇಲ್ಲದೆ, ಚಿಂತೆಯ ಮಾಡಿದರು. ಭಾರತ ಧ್ವಜಕ್ಕೆ ಅಶೋಕ ಚಕ್ರ ಹಾಗೂ ಹಣದ ಮೇಲೆ ಅಶೋಕ ಸಿಕ್ಕ ಹಾಕಿಸಿದರು. ಮೊದಲು ಇದ್ದ ಚರಖಾ (ಬಾವುಟ)ವನ್ನು ಬದಲಿಸಿ, ಬೌದ್ಧ ಧರ್ಮ ಅರಿತು ಅದನ್ನು ಪ್ರಚುರಗೊಳಿಸಿದರು.

ಭವ್ಯ ಭಾರತ ನೇತ
ಅಂಬೇಡ್ಕರ ಬಾಬ ಜ್ಯೋತಿ
ನಿಮ್ಮ ಹೊರತ ನಿಮ್ಮ ಹೊರತ ನಮಗ್ಯಾರಿಲ್ಲದಾತ ॥ ಪಲ್ಲ ॥

ಬಡ ಮಕ್ಕಳು ಜೋತ ಶಾಲೆಗೆ ಸೇರುತ
ಶಿಕ್ಷಣ ಪಡೆಯುತ ಬುದ್ಧನಾಮ ನುಡಿಯುತ

ಹೊಡೆದು ಬಿಡಿಸಿರಿ ಬಡತನ ಭೂತ
ತಮ್ಮ ಕಾಲ ಮೇಲೆ ತಾವು ನಿಂತು ನಡೆಯುತ
ನೀಲಾ ಆಕಾಶದಿಂದ ಭೀಮ ನಾಮ ಕೇಳುತ
ನಿದ್ದೆಯಿಂದ ಎದ್ದ ಬೆಳಕಕಾಣಿ ಭಗವಾನ ಬುದ್ಧ ॥ ನಿಮ್ಮ ॥ [೪೬]

ಇಲ್ಲಿ ಭವ್ಯ ಭರತಕ್ಕೆ ಜ್ಯೋತಿ ಹರಿಸಿದ ಅಂಬೇಡ್ಕರ ಹೊರತು ನಮಗೆ ಬೇರೆ ಯಾವ ದಾತ ಇಲ್ಲ. ಬಡಮಕ್ಕಳಿಗೆ ವಿದ್ಯೆ, ಹಕ್ಕು ನೀಡಿದರು. ಅವರ ಉಪಕಾರ ತೀರಿಸಲು ಆಗದು, ಅವರ ಧಾನ್ಯವನ್ನು ಮಾಡೋಣಾ, ಭೀಮ ಬಾಬರ ನಾಮ ಮನೆ ಮನೆಗೆ ಸಾರೋಣಾ, ಬಡತನ ಭೂತ ಓಡಿಸಿ, ನಮ್ಮನ್ನು ಸ್ವಾವಲಂಬಿಯಾಗಿ ಮಾಡಿದವರು ಬಾಬಾ ಸಾಹೇಬರು ಎಂದು ಅವರ ಸಾಧನೆ ವರ್ಣಿಸಲಾಗಿದೆ.

ಸ್ವರ್ಗ ಲೋಕ ನಿನಗೆ ಬಾಬ ಸಾಕ
ತಿರುಗಿ ಬಾರೊ ಈ ಭವಕ ಬಡವರ ಸಹಾಯಕ
ತಿರುಗಿ ಬಾರೊ ಈ ಲೋಕಕ್ಕೆ
ತಿರುಗಿ ಬಾರೋ ಈ ಭವಕ್ಕೆ ಬಡವರ ಸಹಾಯಕ
ತಿರುಗಿ ಬಾರೋ ಈ ಮರ್ತ್ಯಕ್ಕೆ ॥ ಬಾಬ ಬಾಬ ॥ (ಪಲ್ಲ)

---

೪೫. ಕ್ಷೇತ್ರ ಕಾರ್ಯದಲ್ಲಿ ವಕ್ತಾರರು ಅರ್ಜುನರಾವ ಮು. ಹಾರೋರಗೇರಿ ಬೀದರ, ದಿ.೦೨-೦೮-೦೯ ರಂದು ಸಂದರ್ಶನ.
೪೬. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಗೀತೆಗಳು ಪು.೧೫

ಆಡುವ ಬಾಲಕರು ನಿನ್ನನ್ನು ನೋಡಿ
ಭೀಮ ಬಾಬರ ಪದ್ಯವು ಹಾಡಿ
ಬಾನಿನ ಕನ್ನಡಿ ಬಾಬ ಎನ್ನುತ ಹಾಡಿ
ಕರೆಯುವರು ನಿನ್ನ-ಕರಗಳ ನೀಡಿ
ಬೇಡ-ಮಕ್ಕಳು ಕುಣಿವರು ಹಾಡಿ ನಲಿದಾಡಿ
ಭೀಮ ಬಾಬರ ನೋಡಿ-ಭೀಮಬಾಬರ ನೋಡಿ ॥ ಬಾಬ ॥ [೯೭]

ಬಾಬಾ ಭೀಮರು ವಾಸವಾಗಿರುವ ಸ್ವರ್ಗ ಬಿಟ್ಟು, ಬಡವರಿಗಾಗಿ ಮತ್ತೆ ಬನ್ನಿ. ತಿರುಗಿ ಈ ಮರ್ತ್ಯ ಲೋಕಕ್ಕೆ ಬಾರೋ, ನೀವು ಬಂದರೆ ಬಾಲಕರು ನಿಮ್ಮನ್ನು ನೋಡಿ ಸಂತೋಷಗೊಂಡು ಪದ್ಯ ಹಾಡುವರು. ನಿಮಗೆ ಯಾವುದೇ ಕನಸು, ಕಾರ್ಯ, ಮಾಡಬೇಕು ಅನಿಸಿದರೆ ಬಂದು ಮಾಡಿರಿ ಎಂದು ಭೀಮರನ್ನು ಕರೆಯಲಾಗಿದೆ.

ಬುದ್ಧಗೆ ಶರಣು
ಭೀಮ ಬಾಬಗೆ ಶರಣು
ಬೌದ್ಧ ಧರ್ಮಕ್ಕೆ ನಮ್ಮ ಶರಣು ॥ ಬುದ್ಧಗೆ ಶರಣು ॥
ಕಾಮ ಕ್ರೋಧ ಲೋಭ ಮೋಹ
ಮದ ಮತ್ಸರ
ಆರು ವೈರಿಗಳನ್ನು ಅರಿತ
ಭಗವಾನ ಬುದ್ಧರ
ನಿಜ ಮಾನವ ಧರ್ಮ
ಬೌದ್ಧ ಧರ್ಮಕ್ಕೆ ಸರಿಸಮಾನ ॥ ಬುದ್ಧಗೆ ಶರಣು ॥

ಕವಲ ವಸ್ತು ರಾಜನ
ಮನೆತನದಲ್ಲಿ
ಶುದ್ಧೋದನ ಮಹಾದೇವಿಯ
ದಂಪತಿ ಮಡಿಲಲ್ಲಿ
ಸಂತಾನ ಹರಕೆ
ಮಹಾದೇವಿ ನೀಗಿಸಿದ್ದ ಕೊರತೆ
ಲುಂಬಿಣಿ ವನದಲ್ಲಿ ಬುದ್ಧನ ಜನನ ॥ ಬುದ್ಧಗೆ ಶರಣು ॥

ಹೆತ್ತತಾಯಿ ಮಾಯಾದೇವಿಯ ಬಿಡಲಾಯ್ತು
ತೃಪ್ತಿ ಮಗನ ಲಕ್ಷಣ ಕಣ್ತುಂಬ ನೋಡಿ
ಉಕ್ಕೆ ಹೃದಯ ಪ್ರೀತಿ
ಸ್ವಾರ್ಥಕ್ಕಾಗಿ ಜನ್ಮ ಮಗನ ಬಿಟುಸಾಗಿ
ಹಡೆದಮ್ಮಾ ಶಿಶು ಸಿದ್ದಾರ್ಥನ ತಬ್ಬಲಿಗೊಳಿಸಿ ॥ ಬುದ್ಧಗೆ ಶರಣು ॥

ಸಿದ್ದಾರ್ಥನ ಜಾತಕಕೇಳಲು
ಬಂದಿದ ಒಬ್ಬಯೋಗಿ
ಸಿದ್ದಾರ್ಥನ ಲಕ್ಷಣ ನೋಡಿ

---

೯೭. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಗೀತೆಗಳು ಪು.೧೬

ಜ್ಯೋತಿಷ ತಬ್ಬಿಬ್ಬಾಗಿ ಅತ್ತ
ಮರು ಮರುಗಿ ಮಹಾತ್ಮರ ದರುಶ
ನಕ್ಕಾಗಿ ಯುಗ ಪುರುಷನೆಂದು
ಸಾರಿದ ಯೋಗಿ ॥ ಬುದ್ಧಗೆ ಶರಣು ॥ [೪೮]

ವಚನಕಾರರು 'ಶರಣು' ಎಂಬ ಪದವನ್ನು ಬೌದ್ಧ ದರ್ಶನದಿಂದ ಪಡೆದುಕೊಂಡಿದ್ದಾರೆ. ಆರು ವೈರಿಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂದು ಬುದ್ಧ ಅರಿತು ನಿಜ. ಮಾನವ ಧರ್ಮ, ಬೌದ್ಧ ಧರ್ಮಕ್ಕೆ ಸರಿಸಮಾನವಾಗಿದೆ. ಬುದ್ಧಧರ್ಮಕ್ಕೆ ಶರಣಾಗಿರಿ.

ಬುದ್ಧ ನಿನ್ನಿಂದಲೇ ಇಹಪರವೆಲ್ಲ
ನಿಮ್ಮನ್ನೆ ಕೊಂಡಾಡಿ ಜಗ ಸರ್ವೆಲ್ಲ
ಬುದ್ಧ ನಾ ಶರಣಾದೆ
ಬುದ್ಧ ನಾ ಶರಣಾದೆ ನಿನ್ನ ನೀತಿಗೆ
ನಿಮ್ಮನ್ನೆ ನಂಬಿ ನಮ್ಮ ಭವಿಷ್ಯ ಬಾಳಿಗೆ
ಆಗಲಿ ಸರ್ವರ ಭವ್ಯ ಏಳಿಗೆ [೪೯]

ಪ್ರಸ್ತುತ ಹಾಡಿನಲ್ಲಿ ಸರ್ವರ ಏಳಿಗೆ ಕುರಿತು ಬುದ್ಧನ ನೀತಿಗೆ ನಂಬಿ, ಬೌದ್ಧ ಧರ್ಮಕ್ಕೆ ಮತಾವಲಂಬಿಯಾಗಬೇಕು. ಜಗವೆಲ್ಲಾ ನಿಮ್ಮನ್ನೆ ಕೊಂಡಾಡುತ್ತಿದೆ. ನಿನ್ನಿಂದಲೇ ಇಹಪರವೆಲ್ಲ. ಅಂತರಾತ್ಮದಿಂದ ಬುದ್ಧರ ಸ್ಮರಣೆ ಮಾಡಬೇಕು.

ಬೌದ್ಧ ಧರ್ಮದ ಗುಣಗಾನ ಮಾಡು ಮಾಡು
ಬೌದ್ಧ ಧರ್ಮದ ಗುಣಗಾನ
ನಿಜಧರ್ಮದ ನೀತಿಲಿ ನಡಿಯೊ ನಡಿಯೊ
ನಿಜ ಧರ್ಮದ ನೀತಿಲಿ
ಅಂಧ ವಿಶ್ವಾಸ ಎರಡು ಬಿಡುಬಿಡು
ಗೊಳ್ಳು ಮಾತಿನ ಪುರಾಣ ಸುಡುಸುಡು

ಬರೇ ಕತ್ತಲು ಇರುತದ ಎಲ್ಲಿತನಕ
ಬೆಳಕಿನ ಧರ್ಶನ ಆಗೊತನಕ
ಮತಹೀನನಾಗಿ ಇರುವದು ಎಲ್ಲಿತನಕ
ಜ್ಞಾನದ ಬಾಗಿಲು ತಲುಪುವ ತನಕ
ನಿಜಧರ್ಮದ ನೀತಿಲಿ ನಡಿಯೊ ನಡಿಯೊ
ನಿಜಧರ್ಮದ ನೀತಿಲಿ
ಅಂಧವಿಶ್ವಾಸ ಬಿಡುಬಿಡು
ಗೊಳ್ಳು ಮಾತಿನ ಪುರಾಣ ಸುಡುಸುಡು ॥ ಬೌದ್ಧ ಧರ್ಮ ॥ [೫೦]

ಮೇಲಿನ ಗೀತೆಯಲ್ಲಿ ಪುರಾಣವನ್ನು ಟೀಕಿಸಲಾಗಿದೆ. ಅಂಧ ವಿಶ್ವಾಸ ತ್ಯಜಿಸಿ, ನಿಜ ಧರ್ಮದ ನೀತಿಯಲ್ಲಿ ನಡಿಯಬೇಕು. ಇಡೀ ಭಾರತ ಬ್ರಹ್ಮ ಬಾಬಾ ಸಾಹೇಬ ಭೀಮರು.

---

೪೮. ಕ್ಷೇತ್ರ ಕಾರ್ಯದಲ್ಲಿ ವಕ್ತಾರರು ಆರತಿಬಾಯಿ ಮು.ಮಂತಾಳ, ದಿ.೧೫-೦೭-೦೯ ರಂದು ಭೇಟಿ.

೪೯. ಈಶ್ವರರಾವ ಎಮ್.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೧, ಪ್ರ.ವ.೧೯೯೭

೫೦. ಈಶ್ವರರಾವ ಎಮ್.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೧೬, ಪ್ರ.ವ.೧೯೯೭

ಪುರಾಣದ ನಂಬಿಕೆಯಲ್ಲಿರುವ ನಮ್ಮ ಕರ್ಮ ಕಳೆಯಲು ಬಂದಿದ್ದಾರೆ. ಡಾಂಬಿಕ ಭಕ್ತಿ ಕೊನೆತನ ನಡೆಯದು. ಸತ್ಯಮಾರ್ಗ ಶೋಧಿಸಿ ಪೊಳ್ಳು ಧರ್ಮಕ್ಕೆ ಮರುಳ ಆಗಬಾರದು. ಬೆಳಕಿನ ದರ್ಶನ ಆಗುವ ತನಕ ಕತ್ತಲು ಇರುತ್ತದೆ. ನಂತರ ಕತ್ತಲು ತಾನೇ ಸರಿಯುತ್ತದೆ. ಎಲ್ಲಿಯವರೆಗೆ ಮತಹೀನನಾಗಿರಬೇಕು. ಜ್ಞಾನದ ಬಾಗಿಲು ತಲುಪಿ ನಿಜ ಧರ್ಮ ತಿಳಿಬೇಕು. ಪುರಾಣಗಳ ಚೊಳು ಸುಡಬೇಕು ಬೆಲ್ಲದ ಸಿವಿ ಹಾಗೆ ಇರುವ ಬೌದ್ಧಕ್ಕೆ ಸ್ವೀಕರಿಸಬೇಕು ಎಂಬುದು ಇಲ್ಲಿನ ಈ ಗೀತೆಯ ಬಾವಾರ್ಥವಾಗಿದೆ.

ನಾವಿದ್ದೇವು ಕತ್ತಲದಾಗ
ಕಣ್ಣಿದ್ದರೂ ಕುರುಡರ ಹಾಂಗ
ಕಂಡದೇವರ ಕಾಲಹಿಡಿದರೂ
ಯಾರು ನಂಬಿಲಿಲ್ಲೊ ನಮಗ
ಭೀಮ ಬಂದು ನಮ ಬೆನ್ನಿಗ
ಜಗಕ್ಕೆಲ್ಲ ಬೀರಿ ಜ್ಞಾನದ ಬೆಳಗ
ತಿಳಿಮಾನವ ನಿನಮನಸಿಗ
ಗದ್ದಲಗುಣ ತೆಗಿಯಪ ಕಡಿಗೆ
ಬಾರೋಭೀಮನ ಸೇವೆಯೊಳಗೆ
ಕೊಳೆಯ ಬೇಡೋ ರೊಜ್ಜೊನೊಳಗ ॥ ನಾವು ಬಂದೇವು ನಿಮ್ಮ ॥[೫೧]

ಮೇಲಿನ ಗೀತೆಯಲ್ಲಿ ಅಂಧಶ್ರದ್ಧೆ, ಮೂಡನಂಬಿಕೆ ಬಗ್ಗೆ ಚಿತ್ರಿಸಲಾಗಿದೆ. ಕಣ್ಣಿದ್ದರೂ ಕುರುಡರ ಹಾಗೆ ನಾವು ಕತ್ತಲಲ್ಲಿ ಇದ್ದೇವು. ಕಂಡ ದೇವರ ಕಾಲ ಹಿಡಿದರೂ, ಯಾರೂ ನಮ್ಮನ್ನು ನಂಬಲಿಲ್ಲ. ನಿನ್ನನ್ನು ನೀನು ಅರಿತು, ತಿಳಿ ಮಾನವ ನಿನ್ನ ಮನಸ್ಸಿನಿಂದ ಅರಿಯಬೇಕು. ಗದ್ದಲಗುಣ ತೆಗೆದು ಹಾಕುವ ದೃಢ ನಿರ್ಧಾರ ಮಾಡಬೇಕೆಂದು ಮೇಲಿನ ಗೀತೆಯ ಮೂಲಕ ಹೇಳಲಾಗಿದೆ.

ಬಡವರಿಗಾಗಿ ಕಣ್ಣಿರುಗರೆದ
ಏಕೆ ? ಬಿದ್ದಿರಿ ನಿದ್ರಿಗವಿದ
ಎದ್ದು ನಿದ್ರೆಗೆ ಮಾಡೋ ನಿ ದೂರ
ನಿದ್ರಿ ತೊರೆದರೆ ಜ್ಞಾನದಾಗಾರ । [೫೨]

ಇಲ್ಲಿ ನಿದ್ದೆಯಿಂದ ಎಚ್ಚರಿಸಿ ಎಂದರೆ ಅನ್ಯಾಯ ವಿರುದ್ಧ ಹೋರಾಡುವ ಶಕ್ತಿ ಪಡೆಯಬೇಕು. ಬಾಬಾ ಸಾಹೇಬರು ನಮಗಾಗಿ ಕಣ್ಣೀರು ಹರಿಸಿದ್ದಾರೆ. ಅವರ ಆಶಯದಂತೆ ಜ್ಞಾನ ಪಡೆಯಬೇಕು. ನಿದ್ರೆ ತೊರೆದರೆ ಮಾತ್ರ ಜ್ಞಾನದ ಸಾಗರ ಲಭಿಸುತ್ತದೆ.

ಹಗಲೆಲ್ಲ ಜೈಭೀಮನಂತೆ
ಹೊತ್ತ ಹೋದಮ್ಯಾಲ ನೀಬದಲಾಯಿತಿ
ಭೀಮನಮ್ಯಾಲ ನಿಂದಿಲ್ಲ ಭಕ್ತಿ
ಅನ್ಯದೇವರದು ಅದನಿನಗ ಭೀತಿ
ಸಂಶಯವೆಂಬ ಸುಳಿರೋಗ ನಿನ್ನ
ಸಮಾಧಿ ಮಾಡಿದೆ ಹೇಗೆ ಬಿಡುತ್ತೈತಿ
ಭೀತಿಯೆ ಭೂತಾಗಿ ಕಾಡುತ್ತೈತಿ
ಭೀತಿಯಿಂದ ಹೊಂದಪ್ಪ ಮುಕ್ತಿ
ತಿಳಿಯೋ ಬೌದ್ಧ ಧಮ್ಮದ ಯುಕ್ತಿ
ದೊರೆವುದೋ ಹೊಸ ಚೈತನ್ಯ ಶಕ್ತಿ ॥ [೫೩]

---

೫೧. ಈಶ್ವರರಾವ ಎಮ್.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೧೮, ಪ್ರ.ವ.೧೯೯೭

೫೨. ಅದೇ ಪು.೧೯

೫೩. ಅದೇ ಪು.೧೭

ಪ್ರಸ್ತುತ ಹಾಡಿನಲ್ಲಿ ಭೀಮ ಬಾಬಾರ ಮೇಲೆ ಅಚಲ ಭಕ್ತಿ ಕುರಿತು ಕೆಲವರು ದಿನವೆಲ್ಲಾ ಜೈ ಭೀಮ ಎಂದು ಜಯಕಾರ ಹಾಕಿದರು ರಾತ್ರಿ ಅವರು ಬದಲಾಗುತ್ತಾರೆ. ಕಾರಣ ಅನ್ಯ ದೇವರ ಬಗ್ಗೆ ಅವರಿಗೆ ಭೀತಿ ಇರುತ್ತದೆ. ಭೀತಿಯೆಂಬ ಸಂಶಯದ ಸುಳಿರೋಗವು ಸಮಾಧಿ ಮಾಡುತ್ತದೆ. ಭೀತಿಯು ಭೂತವಾಗಿ ಕಾಡುತ್ತದೆ. ಆದ್ದರಿಂದ ಭೀತಿಯಿಂದ ಮುಕ್ತಿ ಹೊಂದಬೇಕು. ಬೌದ್ಧ ಧಮ್ಮ ತತ್ವಜ್ಞಾನದಿಂದ ಹೊಸ ಚೈತನ್ಯ ಶಕ್ತಿ ದೊರೆಯುತ್ತದೆ.

ನೀ ಗಳಿಸಿದ ಈ ಆಸ್ತಿಯು
ಯಾರಿಗೇ ಇದು ಯಾರಿಗೆ ॥
ಸತ್ಯಾಂಶದ ಪ್ರತಿಫಲವು
ಉಣುವುದು ನಿನ್ನ ಪೀಳಿಗೆ ॥
ಭೀಮ ಬಾಬರ ಪರಿಶ್ರಮದಿ
ಸುಖಕಾಣಿದೆ ನಿಜ ಅರಿತಿದೆ ॥
ಬೌದ್ಧ ಧರ್ಮದ ನಿಜನೀತಿಯು
ಮನತುಂಬಿದೆ ನಿಜಕಂಡಿದೆ ॥ [೫೪]

ಆಸ್ತಿಯು ಸತ್ಯಾಂಶದ ಪ್ರತಿಫಲವಾಗಿದ್ದರೆ ಅದನ್ನು ಮುಂದಿನ ಪೀಳಿಗೆಯವರು ಜೀವಿಸಬಹುದು. ಭೀಮ ಬಾಬರ ಪರಿಶ್ರಮದಿಂದಾಗಿಯೇ ನಾವು ಇಂದು ಕಾಣುತ್ತಿದ್ದೇವೆ ಎಂಬ ನಿಜವನ್ನು ತಿಳಿಯಬೇಕು. ಧರ್ಮದ ನಿಜ ನೀತಿಯನ್ನು ಮನ ತುಂಬಿ ಕೊಂಡೆ ಎಂದು ಭಕ್ತಿಯ ಮೂಲಕ ಸತ್ಯ ನೀತಿಯನ್ನು ಮೇಲಿನ ಗೀತೆಯ ಮುಖಾಂತರ ಹೇಳಲಾಗಿದೆ.

ಅಂದಶ್ರದ್ಧೆಯ ಅಜ್ಞಾನವು
ಉಳಿಸದು ನಿನಗುಳಿಸದು ॥ [೫೫]

ಎಂದು ಇಲ್ಲಿ ಅಂಧಶ್ರದ್ಧೆಯು ಅಜ್ಞಾನ ಇದ್ದ ಗಾಢ ಅಂಧಕಾರದಂತೆ ಅದು ನಿನ್ನನ್ನು ಎಂದು ಉಳಿಸುವುದಿಲ್ಲ ಆದ್ದರಿಂದ ಅಂಧಶ್ರದ್ಧೆ ತೊರೆಯ ಬೇಕು ಎಂದು ತಿಳಿಸಲಾಗಿದೆ.

ಪ್ರಾಣಿಹಿಂಸೆ ಮಾಡುವುದು
ಮಹಾಪಾಪದ ಕಾರ್ಯ
ಪ್ರಾಣಿಪಕ್ಷಿ ಜೀವಹತ್ಯೆ
ಮಹಾಪಾಪದ ಕಾರ್ಯ
ಮೂಕ ಪ್ರಾಣಿ ಪಕ್ಷಿಗೆ
ಕೊಲ್ಲುವುದು ಯಾವ ನ್ಯಾಯ
ಶಾಶ್ವತ ಇರಲು ಬಂದಿಲ್ಲಪ್ಪ ನಿಮ್ಮ ಖಾಯ ॥
ಒಂದಿನ ಮಣ್ಣೊಳು ಬೆರೆವುದು ಮಣ್ಣಿನ ಖಾಯ ।
ಎದ್ದೇಳಪ್ಪಾ ಓ ಮಾನವ ಎಚ್ಚರಾಗು
ಬೌದ್ಧ ಧರ್ಮ ದೀಕ್ಷೆ ಪಡೆದು ಸ್ವಚ್ಛವಾಗು । [೫೬]

ಬೌದ್ಧ ಧರ್ಮ ತತ್ವವಾದ ಅಹಿಂಸೆಯನ್ನು ಆಚರಿಸಬೇಕು, ಜೀವ ಹತ್ಯ ಮಾಡುವುದು ಮಹಾಪಾಪ ಪ್ರಾಣಿಪಕ್ಷಿಗಳನ್ನ ಕೊಲ್ಲುವುದು ಎಲ್ಲಿಯ ನ್ಯಾಯ ? ಭೂಮಿ ಮೇಲೆ ಶಾಶ್ವತವಾಗಿ ಇರಲು ಯಾರು ಬಂದಿಲ್ಲ. ಮಣ್ಣಿನಿಂದ ಬಂದ ಖಾಯ ಮಣ್ಣಿನ ಒಳಗೆ ಬೆರೆಯುತ್ತದೆ ಎಂಬುದಾಗಿ ಮೇಲಿನ ಗೀತೆಯ ಮೂಲಕ ಅಹಿಂಸೆ ತತ್ವ ಸಾರಲಾಗಿದೆ.

---

೫೪. ಈಶ್ವರರಾವ ಎಮ್.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೨೪, ಪ್ರ.ವ.೧೯೯೬

೫೫. ಅದೇ ಪು.೨೫

೫೬. ಅದೇ ಪು.೨೬

ಹಣ ಖರ್ಚು ಮಾಡಿ ಕಂಡ ದೇವ್ರಿಗಿ ಹೋಗ್ತಿ
ಹೋಗದಿದ್ದಾಗ ನಿದ್ರಗಣ್ಣಿಗೆ ಒದರತಿ
ನಿನ್ನ ಮನಕ ಬಡದದ ಭ್ರಾಂತಿ
ಎಷ್ಟು ವರ್ಷ ಇಲ್ಲೆ ಇರಬೇಕಂತಿ
ಎಂದಾದರೊಮ್ಮೆ ಸಾಯುದೈತಿ
ಸಾಯುಕ ಜೀವಕ್ಕೆ ಯಾಕಪ್ಪ ಭೀತಿ ॥ [೫೭]

ಇಲ್ಲಿ ಭಯವನ್ನು ಯಾವ ರೀತಿ ಜಯಿಸಬೇಕು ಎಂಬುದನ್ನು ಕುರಿತು ಕಂಡ ದೇವರಿಗೆ ಹಣ ಖರ್ಚು ಮಾಡಿ ಹೋಗುವರು, ಒಂದು ವೇಳೆ ಹೋಗದಿದ್ದರೆ ಏನಾಗುತ್ತದೆ ಎಂಬ ಭ್ರಾಂತಿ ಹುಟ್ಟುತ್ತದೆ. ಎಂದಾದರೊಮ್ಮೆ ಸಾಯುವ ಜೀವಕ್ಕೆ ಭಯ ಯಾಕೆ ? ಅದನ್ನು ಭಕ್ತಿ ಮಾರ್ಗದಿಂದ ಗೆಲ್ಲಬೇಕು ಎಂದು ಮೇಲಿನ ಗೀತೆಯಲ್ಲಿ ತಿಳಿಸಲಾಗಿದೆ.

ಸುಳ್ಳೆ ಯಾಕೊ ಈ ಜಂಜಾಟ
ಅನ್ಯಧರ್ಮದ ಮಳ್ಳಾಟ
ಎಷ್ಟುದಿನ ನಿನ್ನ ಡೊಂಬರಾಟ
ಗಳಿಸಿದ ಗಂಟು ಅದಸಂಗಟ

ನೀ ಮಾಡಿದ ಈ ಕರ್ಮವು
ಯಾರಿಗೆ? ಇದುಯಾರಿಗೆ ? ॥
ನಿ ಬಯಸಿದ ಸೌಭಾಗ್ಯವು
ಯಾರಿಗೆ ? ಇದು ಯಾರಿಗೆ ?
ನೀ ಮಾಡಿದನ್ನೆ ನೀ ಉಣ್ಣುವೆ
ಬೇರಾರು ಉಣಲಾರರು । [೫೮]

ಪ್ರಸ್ತುತ ಹಾಡಿನಲ್ಲಿ ಅನ್ಯಧರ್ಮದ ಡಾಂಬಿಕತೆಯನ್ನು ಡೊಂಬರಾಟ ಎಂದು ಕರೆಯಲಾಗಿದೆ, ಅನ್ಯಧರ್ಮದ ಅಂಧವಿಶ್ವಾಸವು ಜಂಜಾಟ ಎನಿಸುತ್ತದೆ. ನೀ ಬಯಸಿದ ಸೌಭಾಗ್ಯವು ನೀ ಮಾಡುವ ಪುಣ್ಯ ಕಾರ್ಯದ ಮೇಲೆ ಅವಲಂಬಿತವಾಗಿದೆ. ನೀ ಮಾಡುವ ಕೆಟ್ಟ ಕೆಲಸಕ್ಕೆ ಭಾಗಿ ಬೇರೆ ಯಾರು ಬರುವುದಿಲ್ಲ. ಒಳ್ಳೆಯ ಜೀವನ ಮಾರ್ಗದಲ್ಲಿ ನಡೆಯಬೇಕು ಎಂದು ಮೇಲಿನ ಗೀತೆ ಮೂಲಕ ತಿಳಿಸಿ ಹೇಳಲಾಗಿದೆ.

ನಿ ಗಳಿಸಿದ ಧನದ್ರವ್ಯವು
ಉಳಿಯದು ಇದು ಉಳಿಯದು ॥
ನೀ ಮಾಡಿದ ಸತ್ಕಾರ್ಯವು
ಬರುವುದು ಜೊತೆ ಉಳಿವುದು ॥ [೫೯]

ನಾವು ಸಂಪಾದಿಸಿದ ಐಶ್ವರ್ಯ, ಸಂಪತ್ತು ಉಳಿಯುವುದಿಲ್ಲ, ಖರ್ಚು ಮಾಡಿದ ಹಾಗೆ ಕಡಿಮೆಯಾಗುತ್ತದೆ, ಆದ ಕಾರಣ ಸತಕ್ಕಾರ್ಯ ಮಾಡಿದರೆ ಕೊನೆಯವರೆಗೂ ಉಳಿಯುತ್ತದೆ. "ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ" ವಚನಕಾರರ ನುಡಿ ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ.

ಧರ್ಮ ಧರ್ಮಗಳ ಗುದ್ದಾಟ
ಭವದಿಕಾಣ ॥

---

೫೭. ಈಶ್ವರರಾವ ಎಂ.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೩೦, ಪ್ರ.ವ.೧೯೯೭

೫೮. ಅದೇ ಪು.೨೪

೫೯. ಅದೇ ಪು.೨೬

ಜಾತಿ ಜಾತಿಗಳ ಹೊಡೆದಾಟ
ಜಗದಿಕಾಣ
ಸ್ವಾರ್ಥ ಸಾಧನೆಗೆ ಬೆನ್ನು ಹತ್ತಿ
ತಾಳಿದುರ್ಗುಣ
ನೈಸರ್ಗಿಕ ನೇಮವಿಕೋಪಕ್ಕೆ
ಇಳಿಯಿತಣ್ಣ ॥
ಮುಂದೆ ಜಗತ್ತಿನ ಪ್ರಳಯ
ಕಾಲದೂರಿಲ್ಲಣ್ಣ । [೬೦]

ಇಂದು ಜಗತ್ತಿನಲ್ಲಿ ಧರ್ಮ-ಧರ್ಮಗಳ ನಡುವೆ ಗುದ್ದಟ ನಡೆಯುತ್ತಿದೆ. ಅಲ್ಲದೆ ಜಾತಗಿ ಜಾತಿಗಳ ನಡುವೆಯೂ ಹೋರಾಟ ಆಗುತ್ತಿದೆ. ಸ್ವಾರ್ಥ ಸಾಧನೆಯ ಬೆನ್ನು ಬಿದ್ದಿದ ಕಾರಣ ಈ ದುರ್ಗುಣ ಬಂದಿದೆ. ನೈಸರ್ಗಿಕ ಸುಂದರತೆ ವಿಕೋಪ ಆಗುತ್ತಿದೆ. ಇದೇ ರೀತಿ ಮುಂದು ನಡೆದರೆ ಜಗತ್ತಿನ ಪ್ರಳಯವಾಗುವ ಕಾಲ ದೂರ ಉಳಿದಿಲ್ಲ ಎಂದು ಮೇಲಿನ ಗೀತೆಯ ಮೂಲಕ ನೈಸರ್ಗಿಕ ಸುಂದರತೆ ಹಾಗೂ ಜಗತ್ತಿನ ಶಾಂತಿ ಬೌದ್ಧ ಧರ್ಮದಲ್ಲಿದೆ ಎಂದು ಹೇಳಲಾಗಿದೆ.

ಅಂಧಮಾನವರಿಗೆ
ಕಣ್ಣಾಗಿ ಭೀಮ ಬಂದ
ನಿಮ್ಮ ಕನಸು ಆಗಿನನಸು
ನಮಗೆಲ್ಲ ಹರುಷ ತಂದೆ ॥ ಪ ॥

ಯುಗ ಯುಗಗಳ
ದಾಸ್ಯ ಸಂಕೋಲೆ ಕಡಿದೆ ॥
ಮಾನವರ ನಿಜಸ್ವರೂಪದ
ಕಡೆಗೆ ಸೆಳೆದೆ
ಜಗದ ಅಜ್ಞಾನಿಗಳ
ಅಜ್ಞಾನವನ್ನು ತೊಳೆದೆ ॥ [೬೧]

ಭೀಮ ಬಾಬಾ ಸಾಹೇಬರು ದಲಿತರನ್ನು ಯುಗಯುಗಗಳ ಸಂಕೋಲೆಯನ್ನು ಕಡಿದು ಹಾಕಿದರು. ಜಗದ ಅಜ್ಞಾನಿಗಳ ಅಜ್ಞಾನವನ್ನು ತೊಡೆದು ಹಾಕಿದರು. ಬಡ ಅಂಧರಪಾಲಿಗೆ ಕಣ್ಣಾಗಿ ಬಂದರು. ಭೀಮ ಸಾಹೇಬರ ಕನಸು ನನಸಾಗಿ ನಮಗೆಲ್ಲಾ ಹರುಷ ತಂದಿದೆ.

ಇಡೀ ಮಾನವಕುಲ
ಒಂದೇ ಎಂದು ಬಗೆದೆ ॥
ನಿಜಮಾನವ ಧರ್ಮದ
ಸೇವೆಗೆ ಕರೆದೆ । [೬೨]

ಪ್ರಸ್ತುತ ಹಾಡಿನಲ್ಲಿ ಭೀಮಸಾಹೇಬರ ಉದಾರ ಗುಣವನ್ನು ಕುರಿತು ಇಡೀ ಮಾನವ ಕುಲವನ್ನು ಒಂದೇ ಎಂದು ತಿಳಿದರು. ನಿಜಮಾನವನನ್ನು ಧರ್ಮ ಸೇವೆಗೆ ಕರೆದರು.

---

೬೦. ಈಶ್ವರರಾವ ಎಂ. ಕರುಣಾ ಸಾಗರ (ಸಂ) ಧಮ್ಮ ಸಂದೇಶ ಗೀತೆಗಳು ಪು.೨೬, ಪ್ರ.ವ.೧೯೯೭
೬೧. ಅದೇ ಪು.೨೬
೬೨. ಅದೇ ಪು.೨೮

ಇಡೀ ವಿಶ್ವಮಾನವರ
ಪರಿಚಯ ಮಾಡಿಸಿದೆ ॥
ನಿಜಕರ್ತವ್ಯೆಡೆಗೆ
ನಮ್ಮ ಕೂಗಿ ಕರೆದೆ
ಉಸಿರಾಗಿ ಭೀಮಬಂದೆ । [೬೩]

ಮೇಲಿನ ಹಾಡಿನಲ್ಲಿ ಬಾಬಾ ಸಾಹೇಬರು ಇಡೀ ವಿಶ್ವ ಮಾನವರ ಪರಿಚಯ ಮಾಡಿಸಿಕೊಟ್ಟರು. ನಮ್ಮನ್ನು ನಿಜಕರ್ತವ್ಯದ ಕಡೆಗೆ ಕೂಗಿ ಕರೆದರು. ದೀನದಲಿತರ ಉಸಿರಾಗಿ ಬಾಬಾ ಭೀಮರು ಬಂದರು ಎಂದು ವಿವರಿಸಲಾಗಿದೆ.

ಮೂಢನಂಬಿಕೆ ಅನಿಷ್ಟ
ಪದ್ಧತಿ ಅಳಿಸಪ್ಪ
ಮುಂದಾದರೂ ಮಾಡು
ನಿಜ ಅರಿತು ಹೊಸ ಸಂಕಲ್ಪ
ಯಾವದೇವ್ರು ಎಂದಾದರೂ
ತಿಂದಿತೇ ನಷ್ಟ
ಹೊಟ್ಟೆ ಪಾಡಿಗಾಗಿ ಹೊಂಚು
ಹಾಕಿ ಹೊಟ್ಟೆಪಾಡಿಗಪ್ಪ [೬೪]

ಮೂಢನಂಬಿಕೆಯನ್ನು ಮೇಲಿನ ಹಾಡಿನಲ್ಲಿ ಕಟುವಾಗಿ ಟೀಕಿಸಲಾಗಿದೆ. ಮೂಢನಂಬಿಕೆ ಎಂಬುದು ಅನಿಷ್ಟಪದ್ಧತಿ ಇದನ್ನು ಅಳಿಸಬೇಕು. ಮುಂದೆ ನಿಜ ಅರಿತು ಹೊಸ ಸಂಕಲ್ಪ ತಿಳಿಯಬೇಕು. ದೇವರಿಗೆ ನಂಬಿ ಕುಳಿತರೆ ಹೊಟ್ಟೆ ತುಂಬುವುದಿಲ್ಲ. ದೇವರು ಬಂದು ಊಟ ನೀಡುವುದಿಲ್ಲ. ಆದ ಕಾರಣ ನೀನು ಹೊಟ್ಟೆಪಾಡಿಗಾಗಿ ಹೊಂಚು (ದುಡಿಮೆ ಹೊಂಚು) ಹಾಕಿ ಹಸಿವು ಶಾಂತಗೊಳಿಸಬೇಕು.

ಬಾರಕ್ಕೆ ಬಾರವ್ವ ಹೋಗುನು ಬಾ
ಸ್ವಚ್ಛದಾರಿಗೆ ದೀಕ್ಷಾ ಭೂಮಿಗೆ ॥
ಬಾರಪ್ಪ ಬಾರಣ್ಣ ಹೋಗುನುಬಾ
ಜ್ಞಾನದಾರಿಗೆ ದೀಕ್ಷಾ ಭೂಮಿಗೆ ॥
ಅಂಧಶ್ರದ್ಧೆಯೋಳು ನೀ ದುಡುಕಬೇಡ
ನಿನ್ನಲ್ಲಿದ್ದ ಸಂಪತ್ತು ಹಾಳಮಾಡಬೇಡ । [೬೫]

ಬೌದ್ಧ ಧರ್ಮಿಯ ದೀಕ್ಷ ಭೂಮಿ ಇರುವ ನಾಗಪೂರ ಕೇವಲ ದೀಕ್ಷ ಭೂಮಿ ಆಗಿಲ್ಲ ಅದು ನಮಗೆ ಜ್ಞಾನದಾರಿ ತೋರಿಸುವ ಭೂಮಿ ಆಗಿದೆ. ಅಂಧಶ್ರದ್ಧೆಯಿಂದ ದುಡುಕಬಾರದು. ನಿನ್ನಲ್ಲಿ ಇರುವ ಸಂಪತ್ತು ಅಂದರೆ ಜ್ಞಾನ ಅಥವ ವ್ಯವಹಾರ ಸಂಪತ್ತನ್ನು ಹಾಳು ಮಾಡಿಕೊಳ್ಳಲಾರದೆ, ಸದುಪಯೋಗ ಪಡೆದುಕೊಳ್ಳಬೇಕು.

ಹತ್ತಹತ್ತೂದೇವರ ಹರಕೆಯು
ಹೊತ್ತಿ ಹಾಳಾದಿ
ಕಂಡಂಗೆ ಡೊಂಬರಾಟ ಮಾಡುವ
ಗೋಜಿಗೆ ಯಾಕ್ಹೋದಿ ॥
ಹನಿ ಹನಿಗೂಡಿ ಹಳ್ಳವಾದಂಥ
ಹಣವು ಹಾಳಮಾಡಿ
ಸಾಲಗಾರರ ಕಾಟವು ತಾಳದೆ ನೆಳ್ತಿದಿ । [೬೬]

---

೬೩. ಈಶ್ವರರಾವ ಎಂ. ಕರುಣಾ ಸಾಗರ (ಸಂ) ಧಮ್ಮ ಸಂದೇಶ ಗೀತೆಗಳು ಪು.೨೮, ಪ್ರ.ವ.೧೯೯೭

೬೪. ಅದೇ ಪು.೩೦

೬೫. ಅದೇ ಪು.೩೧

೬೬. ಅದೇ ಪು.೩೧

ಪ್ರಸ್ತುತ ಗೀತೆಯಲ್ಲಿ ಅನ್ಯ ದೇವತಾ ಆರಾಧನೆಯನ್ನು ಟೀಕಿಸಲಾಗಿದೆ. ಹತ್ತು ದೇವರ ಹರಕೆಯ ಬಾರ ಹೊತ್ತಿ ಹಾಳಾಗುವಿರಿ. ಡೊಂಬರಾಟದ ಈ ಗೋಜಿಗೆ ಹೋಗಬಾರದು. 'ಹನಿ ಹನಿ ಕೂಡಿ ಹಳ್ಳವಾದಂತೆ, ಹಣವು ವ್ಯರ್ಥ ಖರ್ಚು ಮಾಡಬಾರದು ಅದನ್ನು ಕೂಡಿ ಇಟ್ಟರೆ ಸಾಲ ಮಾಡುವ ಪ್ರಸಂಗ ಬರುವುದಿಲ್ಲ. ಇಲ್ಲವಾದರೆ ಸಾಲ ಮಾಡಿದ ಮೇಲೆ ಸಾಲಗಾರರ ಕಾಟವು ತಾಳಲಾರದೆ ನೊಂದಕೊಳ್ಳಬೇಕಾಗುತ್ತದೆ.

ಶ್ರೀಮಂತ ಬಡವರ ಅಂತರ
ಅರಿಯದೇ ಸತ್ತೋದಿ
ಸ್ವಂತಕಾಲ ಮೇಲೆ ನಿಲ್ಲುವುದೇ
ನೀಮರೆತ್ಹೋದಿ ॥
ಬಿದ್ದೆ ಗುಣದೇವರ ಬೆನ್ನು
ಹತ್ತಿನೀಬತ್ಹೋದಿ
ಬುದ್ಧಿವಂತರ ಸಂಘ ಮಾಡದೇ ಕೆಟ್ಹೋದಿ ।[೬೭]

ಮೇಲಿನ ಗೀತೆಯಲ್ಲಿ ದಲಿತರ ಬುದ್ಧ ಸಂಘವನ್ನು ಕುರಿತು ಕೆಲವು ಮುಗ್ಧ ದಲಿತರು ಶ್ರೀಮಂತ ಕೆಟ್ಟ ಗುಣಗಳನ್ನು ತಿಳಿಯುವುದಿಲ್ಲ. ಶ್ರೀಮಂತರು ದಲಿತರಿಂದ ಲಾಭಗಳಿಸಿ, ಅವರನ್ನು ಸ್ವಾವಲಂಬಿ ಆಗಲು ಬಿಡುವುದಿಲ್ಲ. ಇಂತ ದಲಿತರು ಬುದ್ಧ ಸಂಘ ಕಟ್ಟಿಕೊಂಡು ಜ್ಞಾನಿಗಳಾಗಬೇಕು.

ಬೌದ್ಧ ಧರ್ಮಕ್ಕೆ ನಂಬಿ ಶುದ್ಧನಾಗು
ನಮ್ಮನ್ನೇ ಅವಲಂಬಿಸಿ ನಮ್ಮ ಬಾಬಾ
ನುಡಿದಂತೆ ನೀನು ನಡೆಯುವಂತೆ ನಾನು ।[೬೮]

ಬೌದ್ಧ ಧರ್ಮ ನಂಬಿ ನೀ ಶುದ್ಧನಾಗು. ಈ ಧರ್ಮ ಸ್ವೀಕಾರ ಮಾಡಿ ನುಡಿದಂತೆ ನಡೆಯುವ ನಾಗು ಸತ್ಯದ ಮರ್ಮ ಅರಿಯದಿದ್ದರೆ ಅಜ್ಞಾನದ ಅಂಧಕಾರ ಬಾಳನ್ನು ಆವರಿಸುತ್ತದೆ. ಭವದ ಕತ್ತಲ ಬಾಳಿಗಿಂತ ತತ್ವದ ಬಾಳೆ ಸುಖಕರ. ಮನಸ್ಸು ಮಾದೇವ ಇದ್ದ ಹಾಗೆ ಬೌದ್ಧ ಧರ್ಮ ಹೊರತು ಬೇರೆಯಾವ ಧರ್ಮಕ್ಕೂ ಮರಳಾಗಬೇಡ, ದುಡಿಯದಿದ್ದರೆ ನಿನ್ನ ಹೊಟ್ಟೆಗೋಳು ಯಾರು ಕೇಳುವುದಿಲ್ಲ ಎಂಬ ಹಾಡಿನ ಸಾಲು ಕಾಯಕ ಧರ್ಮ ಎಂದು ಸಾರುತ್ತದೆ.

ಅಕ್ಕ ಹೋಗುನುಬಾರ
ತಂಗಿ ನೋಡುನುಬಾರ
ಭಗವಾನ ಬುದ್ಧದೇವರ
ರೇಕುಳಗಿಯ ವಿಹಾರ ॥ ಪ ॥
ಕರ್ನಾಟಕ ತುದಿ
ಸುಜ್ಞಾನದ ನಿಧಿ
ಜಿಲ್ಲೆಯು ಬೀದರ
ಬುದ್ಧಗೆ ನೆನಯನುಬಾರ
ಹೋಗುನುಬಾರ ವಿಹಾರ ॥ ಅಪ ॥

ಹಲವು ದೇವರ ಹರಕೆಯು ಹೊತ್ತು ಸೋತೆವು
ಒಬ್ಬರನೊಬ್ಬರು ಕಂಡು ಮರುಳಾದೇವು

---

೬೭. ಈಶ್ವರರಾವ ಎಂ. ಕರುಣಾ ಸಾಗರ (ಸಂ) ಧಮ್ಮ ಸಂದೇಶ ಗೀತೆಗಳು ಪು.೩೧, ಪ್ರ.ವ.೧೯೯೭

೬೮. ಕ್ಷೇತ್ರ ಕಾರ್ಯದಲ್ಲಿ ವಕ್ತಾರರು ಸರಸ್ವತಿ ಮು.ಧನ್ನೂರ, ದಿ.೨೪-೦೮-೦೯ ರಂದು ಭೇಟ್ಟಿ

ಉಣವಲ್ದದೇವರ ಕಂಡರೆಯಡಿ ಇಟ್ಟೇವು
ಉಣುವ ದೇವರು ಬಂದ್ರೆ ಹೊರಗೆ ಅಟ್ಟೇವು
ಇಟ್ಟಿಟ್ಟಲ್ಲೇ ಹೋಯ್ತು
ಕೊಟ್ಟಿಕಟ್ಟಲ್ಲೆ ಹೋಯ್ತು
ನಮ್ಮ ಸರ್ವಸ್ವಹಾಳಾಯ್ತು
ಬುದ್ಧಗೆ ನೆನೆಯನುಬಾರ
ಹೋಗುನಬಾರ ವಿಹಾರ
ಅಕ್ಕ ಹೋಗು . . . . . . . [೧೯]

ಬೀದರ ಜಿಲ್ಲೆಯ ಹುಮನಾಬಾದ ತಾಲ್ಲೂಕಿನಲ್ಲಿರುವ ರೇಕುಳಗಿ ಬುದ್ಧ ವಿಹಾರವು ಕರ್ನಾಟಕದ ತುದಿಯಲ್ಲಿದೆ. ಇದು ಸುಜ್ಞಾನದ ನಿಧಿಯಾಗಿದೆ. ಬುದ್ಧ ದೇವರೆ ವಿಹಾರವನ್ನು ನೋಡೋಣ ಬಾ. ಬುದ್ಧ ದೇವರಿಗೆ ಭಕ್ತಿ ನೆನೆಯೋಣಾ 'ಉಣವಲ್ದದೇವರ ಕಂಡರೆಯಡಿ ಇಟ್ಟೇವು' ಎಂಬ ಸಾಲು ವಚನಕಾರರ ಢಾಂಬಿಕ ಭಕ್ತಿಯ ಟೀಕೆಯ ಪ್ರತಿಧ್ವನಿಯಾಗಿದೆ. ಈ ರೀತಿ ಮೇಲಿನ ಗೀತೆಯಲ್ಲಿ ತೋರಿಕೆ ಭಕ್ತಿಯನ್ನು ಟೀಕಿಸಲಾಗಿದೆ.

ಗಂಡುಹೆಣ್ಣಿನ ಶರೀರದ
ಲ್ಲಿದ್ದಾತ್ಮದ ಕುಲವಾದಯ್ಯಾ ?
ಶರೀರಕ್ಕೆ ಕುಲಭೇದ ಆತ್ಮ
ಕೆಲ್ಲಿಯಕುಲ ನಿರ್ವಿಕಾರವಯಕ್ಯಾ
ದಾಸಮೌನರ ಶಿಶುಕೂಗಿ
ಹೇಳಿದ ನಿಜಂಶವ್ಯೂ ತಿಳಿರಯ್ಯಾ
ಯಾವದು . . . . . . . . . . [೨೦]

ಇಲ್ಲಿ ಆತ್ಮದ ಮುಂದೆ ಯಾವುದೇ ಗಂಡು-ಹೆಣ್ಣಿನ ಲಿಂಗ ಭೇದ ನಿಲ್ಲದು ಎಂದು ಹೇಳಲಾಗಿದೆ. ಈ ವಿಚಾರವು ಸಮಾನತೆಯ ತತ್ವವನ್ನು ಸಾರುತ್ತದೆ. ಶರೀರಕ್ಕೆ ಕುಲಭೇದ ಇರುವುದಿಲ್ಲ.

ಸಂಪ್ರದಾಯ ಭೂತನಮಗೆ ಬಿಡಲಿಲ್ಲ
ಸರ್ವಸ್ವನಾಶ್ಯಾಯಿತೇನೇನು ಉಳಿಯಲಿಲ್ಲ
ಯಾವದೇವರು ಕೈಮಾಡಿ ನಮಗೆ ಕರೆಯಲಿಲ್ಲ
ಪ್ರಾಣಹಿಂಸೆ ಪಾಪಗೈದೆ ತಿಳಿಯಲಿಲ್ಲ
ಹಣಗುಣ ಕಳಕೊಂಡ
ಪುನಃಪಾಪ ಕಟ್ಟಿಕೊಂಡ
ಮಾಡಿದೆಲ್ಲ ಆಯ್ತುದಂಡ
ಬುದ್ಧಗೆ ನೆನೆಯನುಬಾರ
ಹೋಗುನುಬಾರ ವಿಹಾರ
ಅಕ್ಕ ಹೋಗು . . . . . . . . . [೨೧]

---

೧೯. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಜಯಶ್ರೀ ಮು.ಚಿಟಗುಪ್ಪಾ ದಿ.೨೯-೦೮-೦೯ ರಂದು ಸಂದರ್ಶನ
೨೦. ಅದೇ
೨೧. ಈಶ್ವರ ರಾವ ಎಂ. ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೨೮, ಪ್ರ.ವ.೧೯೯೭

ಇಲ್ಲಿ ಅಂಥ ಸಂಪ್ರದಾಯ ಪದ್ಧತಿ ಅನುಸರಿಸುವುದರಿಂದ ಆಗುವ ಅನಾಹುತ ಕುರಿತು– ಸಂಪ್ರದಾಯ ನಾವು ಬಿಡದೆ ಹೋದರೆ ಅವು ಭೂತವಾಗಿ ನಮ್ಮ ಸರ್ವಸ್ವ ನಾಶ ಮಾಡುತ್ತದೆ. ಇದರಿಂದ ಹಣ ಗುಣ ಕಳೆದು ಕೊಳ್ಳಬೇಕಾಗುತ್ತದೆ. ಪುನಃಪಾಪ ಕಟ್ಟಿಕೊಂಡರೆ ಮಾಡಿದೆಲ್ಲ ಪ್ರಯತ್ನ ವ್ಯರ್ಥವಾಗುತ್ತದೆ.

ನಮಗೆಷ್ಟು ಪ್ರೀತಿಪ್ರೇಮ ನಮ್ಮಪ್ರಾಣ
ಅನ್ಯರಿಗೂ ಅಷ್ಟೆ ಪ್ರೀತಿಅವರ ಪ್ರಾಣ
ನಿನಸುಖಕ್ಕಾಗಿ ಮುರಿಯದಿರು ಅನ್ಯರ ಗೋಣ
ನೀಮಾಡಿದು ನೀನೇ ಉಣ್ಣುವಿ ಬಿಡುದುರ್ಗುಣ
ದಾಸಮೌನರ ಶಿಸು
ನಿಜಹೇಳಿದ ಸೋಸು
ಉಳಿಸೋಣಬಾರ ಹಣಕಾಸು
ಬುದ್ಧಗೆ ನೆನೆಯನುಬಾರ
ಹೋಗುನುಬಾರ ವಿಹಾರಕ್ಕೆ
ಅಕ್ಕ ಹೋಗು . . . . . . . . . [೭೨]

ಮೇಲಿನ ಗೀತೆಯ ಮೂಲಕ ಸ್ವಾರ್ಥ ತೊರೆಯಬೇಕು ಎಂದು ತಿಳಿಸಲಾಗಿದೆ – ಆ ಶ್ರೀಮಂತರಿಗೆ ಪ್ರಾಣ ಎಷ್ಟು ಅವರಿಗೆ ಪ್ರೀತಿ ಇರುತ್ತದೆಯೋ ಹಾಗೆ ಬಡವರು ಸಹ. ನಿಜಸುಖಕ್ಕಾಗಿ ಅನ್ಯರಿಗೆ ಮೋಸ ಮಾಡಬಾರದು ಮಾಡಿದ ಪಾಪವು ನಮ್ಮನ್ನು ಬಿಡದೆ ಒಂದು ದಿನ ನಾಶಮಾಡುತ್ತದೆ.

ನೆಲವಡೆದು ಕಲ್ಲುತೆಗೆದಿದೆ
ಬೆಲೆಕಟ್ಟುವರ್‍ಯಾರು ?
ಕಲ್ಲುಮೋಣಿಸಿ ಮನೆಯಕಟ್ಟಿದೆ
ಅಲ್ಲಿ ಇರುವವರ್‍ಯಾರು ?
ಅದೇ ಹುಲ್ಲಿನ ಝೋಪಡಿಕೊಂಪೆ
ನಿನ್ನ ಕೇಳುವರ್‍ಯಾರು ?
ಎತ್ತಿನಂತೆ . . . . . . . . . [೭೩]



ಇಲ್ಲಿ ಶ್ರೀಮಂತರ ಶೋಷಣೆಯನ್ನು ವಿರೋಧಿಸಲು ಎಚ್ಚರಿಸಲಾಗಿದೆ. ಕೂಲಿ ಮಾಡುವರು ನೆಲವಡೆದು ಕಷ್ಟಪಟ್ಟು ಕಲ್ಲುತೆಗೆಯುವರು. ಕಲ್ಲು ಮೋಣಿಸಿ ಮನೆ ಕಟ್ಟುವರು, ಅಲ್ಲಿ ಶ್ರೀಮಂತರು ಸುಖವಾಗಿ ಇರುವರು. ಬಡವರು ಗುಡಿಸಿಲದಲ್ಲಿ ಇರುವರು. ದಲಿತರ ಕಣ್ಣೀರಿನ ಮೇಲೆ ಶ್ರೀಮಂತರು ಸಂತೋಷ ಅನುಭವಿಸುವರು.

ಎತ್ತಿನಂತೆ ತೊತ್ತಾಗಿ ದುಡಿದೆ
ಸುಖ ಉಂಡವರಾರು ?
ಸರ್ವರ ಸೇವೆಯೊಳು ನಿ ಬೆಂದೆ
ನಿನ್ನ ಅರಿತವರಾರು ?
ನೆಲಅಗಿದು ಬಾವಿತೋಡಿದೆ
ನೀರು ಕುಡಿವವರ್‍ಯಾರು ?
ಸಸಿಯಿಂದ ಮರವಾಗಿ ಬೆಳೆಸಿದೆ

---

೭೨. ಈಶ್ವರ ರಾವ ಎಂ. ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೨೮, ಪ್ರ.ವ.೧೯೯೭
೭೩. ಅದೇ ಪು.೩೯

ಫಲತಿನ್ನುವರ್ಯ್ಯಾರು ?
ನಿನ್ನ ಈ ಬಡತನಕ್ಕೆ
ಹೊಣೆಗಾರರ್ಯ್ಯಾರು ?
ಎತ್ತಿನಂತೆ . . . . . . . . .[೭೪]

ಸರ್ವರ ಸೇವೆ ಮಾಡಿ ಬೆಂದರು, ಬಡವರನ್ನು ಯಾರು ತಿಳಿಯುವುದಿಲ್ಲ. ಎತ್ತಿನಂತೆ ಆಳಾಗಿ ದುಡಿದರು ಸಹ, ಪ್ರಾಣಿಗಿಂತ ಕೀಳಾಗಿ ಕಾಣುತ್ತಾರೆ. ನೆಲ ಅಗಿದು ಬಾವಿ ತೋಡಿದರು. ನೀರು ಕುಡಿಯಲು ಅವಕಾಶ ಇಲ್ಲ, ದಲಿತರ ಕಷ್ಟಕ್ಕೆ ಬೆಲೆಯೇ ಎಲ್ಲಿ ? ಸಸಿಗಳನ್ನು ಮರವಾಗಿ ಬೆಳೆಸಿದರೂ ಫಲ ಸಿಗುವುದಿಲ್ಲ. ನಿನ್ನ ಈ ಬಡತನಕ್ಕೆ ಹೊಣೆಗಾರರ್ಯ್ಯಾರು ಎಂಬ ಪ್ರಶ್ನೆ ಏಳುತ್ತದೆ.

ಹೊಲ ನುರಿಸಿ ಫಸಲು ತೆಗೆದಿದೆ
ಬೆಳೆಉಂಬುವರಾರು ?
ಎತ್ತುಕಟ್ಟಿ ಮೊಟ್ಟೆಹೊಡೆದಿದೆ
ಸುಖಪಡೆದವರಾರು ?
ಯುಗಯುಗದಿ ತುಳಿತಕ್ಕೊಳ
ಗಾದೆ ದಾರಿತೋರಿದವರಾರು ?

ಭಾರತದ ಶ್ರೀಮಂತರಿಗೆ
ಎದುರಾದವರಾರು ?
ಸೃಷ್ಠಿ ಹೊತ್ತು ಈ ಭೂಭಾಗ
ಭೂಮಾಲೀಕರಾರು ?
ನಿಮ್ಮ ನಿಮ್ಮಲ್ಲೆ ಬೆಂಕಿಯು ಹಚ್ಚಿ
ಕುಳಿತು ನೋಡುವವರಾರು ?[೭೫]

ಹೊಲದಲ್ಲಿ ಬೆವರು ಸುರಿಸು ದುಡಿದರು ಬೆಳೆ–ಕಾಳು ಪಡೆಯಲು ದಲಿತರನ್ನು ವಂಚಿತರಾಗಿ ಮಾಡುತ್ತಾರೆ. ಯು–ಯುಗ ಕಳೆದೂ ತುಳಿತಕ್ಕೆ ಒಳಗಾದವರಿಗೆ ದಾರಿ ತೋರಿಸಿದವರು ಯಾರು ? ಶ್ರೀಮಂತರ ವಿರುದ್ಧ ವಿರೋದಕ್ಕೆ ನಿಂತವರು ಯಾರು ? ಸೃಷ್ಟಿಯ ಭೂಭಾಗದ ಭೂಮಾಲಿಕ ಯಾರು ? ನಿಮ್ಮ ನಿಮ್ಮಲ್ಲೆ ಹೊಡೆದಾಡಿಕೊಂಡರೆ ದಾರಿ ತೋರಿಸುವರು ಯಾರು ? ಎಂಬ ಪ್ರಶ್ನೆ ಮೂಡಿ ಕಾಡುತ್ತದೆ. ಇದಕ್ಕೆ ಉತ್ತರವಾಗಿ ಬುದ್ಧ–ಭೀಮರು ನಿಲ್ಲುತ್ತಾರೆ. ಎಂದು ಮೇಲಿನ ಹಾಡಿನ ಮೂಲಕ ಬುದ್ಧ ಭೀಮರು ಬಂದು ದಲಿತರ ಶೋಷಣೆಯನ್ನು ಹೋಗಲಾಡಿಸಿದರು ಎಂದು ಹೇಳಲಾಗಿದೆ.

ಅಂಧವಿಶ್ವಾಸ ಮಾಡುವದು
ಮಂದ ಬುದ್ಧಿಯೋ
ಕಂದಕದೊಳು ಬಿದ್ದು ಒದ್ದಾಡುವದು
ಚಂದವಲ್ಲವೋ
ಬೌದ್ಧ ಧರ್ಮಗ್ರಂಥದಿ ನೋಡು
ಜ್ಞಾನದ್ವಾದಿಯು
ಗಂಥ ತೀಡಿದ್ದಾಗೆ ಬಲು
ಸುಗಂಧವು
ಪೊಳ್ಳು ಧರ್ಮದಿ ಮಳ್ಳಾಗಿ

---

೭೪. ಈಶ್ವರ ರಾವ ಎಂ. ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೪೦, ಪ್ರ.ವ.೧೯೯೭

೭೫. ಅದೇ ಪು.೪೦

ಬಾಳುವುದು ಒಳ್ಳೆದಲ್ಲವೋ
ಬಾ ನೀನು ಬಾ ಬುದ್ಧ ವಿಹಾರಕ್ಕೆ : ೨
ದರುಶನಪಡೆದು [೭೬]

ಇಲ್ಲಿ ಅಂಧ ವಿಶ್ವಾಸ ತ್ಯಜಿಸಬೇಕು ಎಂದು ಹೇಳಲಾಗಿದೆ. ಅಂಥ ಆಚಾರಣೆಯಿಂದ ಮಂದ ಬುದ್ಧಿಯಾಗಿ, ಕಂದಕದೊಳು ಬಿದ್ದು ಒದ್ದಾಡುವುದು ಸರಿಯಲ್ಲ. ಬೌದ್ಧ ಧರ್ಮದಿಂದ ಜ್ಞಾನ ಪಡೆಯಬೇಕು. ಈ ದಾರಿಯು ಗಂಧ ತೀಡಿದ ಹಾಗೆ ಸೂಗಂಧವಾಗಿರುತ್ತದೆ. ಪೊಳ್ಳು ಧರ್ಮದಲ್ಲಿ ಮಳ್ಳಾಗಿ ಬಾಳುವುದು ಒಳ್ಳೆಯದಲ್ಲ ಎಂದು ಹೇಳಲಾಗಿದೆ.

ನಿನ್ನ ನೀ ತಿಳಿದು ನೋಡ
ಕೆಟ್ಟ ಮಾರ್ಗದಿ ಹೋಗಬೇಡ
ಕಂಡದೇವ್ರ ನಂಬಬೇಡ
ನಂಬಿ ಹಾಳಾಗಬೇಡ ಆ ಆ ಆ ಆ
ಅಂಬೇಡ್ಕರರು ಅವಕಾಶವಿತ್ತರು
ವಿದ್ಯೆ ಕಲಿಯಿರಿ
ಬುದ್ಧದೇವರು ಬೆಳಕುಬೀರಿದರು
ಶುದ್ಧಾಗಿರಿ
ಅಂಧವಿಶ್ವಾಸವು ನಮಗೆ
ಅತಿಹಾನಿಯೋ
ನಿಜಾಂಶ ತಿಳಿದು ನಡೆದರೆ
ಶುದಾದೇವ್ರೋ
ಬುದ್ದ ದೇವರ . . .   . . . [೭೭]

ಮೊದಲು ತನ್ನನ್ನು ತಾನು ತಿಳಿದುಕೊಂಡು ಕೆಟ್ಟ ಮಾರ್ಗದಲ್ಲಿ ಹೋಗಬಾರದು, ಕಂಡ ದೇವರನ್ನು ನಂಬಿ ಹಾಳಾಗಬಾರದು. ಬುದ್ಧದೇವರು ಬೆಳಕು ಬೀರಿದ್ದಾರೆ. ಆ ಬೆಳಕಿನಲ್ಲಿ ನಾವು ಶುದ್ಧರಾಗೋಣ, ಅಂಬೇಡ್ಕರರು ಅವಕಾಶವಿತ್ತ ವಿದ್ಯೆಯನ್ನು ಕಲಿಯೋಣ ಅಂದ ವಿಶ್ವಾಸ ಅತಿಹಾನಿಯಾದದು, ನಿಜಾಂಶ ತಿಳಿದು ನಡೆಯಬೇಕು.

ಭೀಮ ಪಟ್ಟ ಕಷ್ಟದ ಅರಿವು ಯಾರಿಗಿಲ್ಲ
ಅಧಿಕಾರದಮಲಿನಲ್ಲಿ ಮರೆವರೆಲ್ಲ ॥ ಪ ॥

ಬಡಕುಟುಂಬದಲ್ಲಿ ಹುಟ್ಟಿ
ದೇಶ ಸ್ವಾಭಿಮಾನ ತೊಟ್ಟಿ
ನಮಗಾದ ಅನ್ಯಾಯ
ಕಂಡು ಕಣ್ಣೆರಿಟ್ಟ
ಅನುಭಾವದ ಮೃತ ಗಳಿಸಿ
ಗೊಡ್ಡು ಸಂಪ್ರದಾಯ ಸುಡಿಸಿ
ನಮ್ಮ ಬಂಧನವು ಬಿಡಿಸಿ
ಮುಕ್ತಿಮಾರ್ಗ ತೋರಿದ ॥ ಭೀಮ ಪಟ್ಟ ॥

೭೬. ಈಶ್ವರ ರಾವ ಎಂ. ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೫೦, ಪ್ರ.ವ.೧೯೯೭
೭೭. ಅದೇ ಪು.೪೦

ವಧೆಕಲೀವ ವೇಳೆಯಲ್ಲಿ
ಬರೋಡಾ ಮಹಾರಾಜರಲ್ಲಿ
ಕೊಟ್ಟ ಮಾತಿನಂತೆ ನಡೆಯಲು
ಹೋದ್ರೊ ಸೇವೆಯಲ್ಲಿ
ಬರೋಡಾ ಸಂಸ್ಥಾನದಲ್ಲಿ
ಅಜ್ಞಾನ ಜನರ ಮಧ್ಯದಲ್ಲಿ
ಭೀಮ ಅನುಭವಿಸಿದ
ನೋವು ಬಲ್ಲವರಾರಿಲ್ಲ ॥ ಭೀಮ ಪಟ್ಟ ॥ [೭೮]

ಭೀಮ ಸಾಹೇಬರು ನಮಗಾಗಿ ಪಟ್ಟ ಕಷ್ಟ ನೋವನ್ನು ಯಾರು ಅರಿತಿಲ್ಲ ಎಂದು ಮೇಲಿನ ಹಾಡಿನಲ್ಲಿ ಹೇಳಲಾಗಿದೆ. ಬಾಬಾ ಸಾಹೇಬರು ಒದಗಿಸಿದ ಸೌಲಭ್ಯದಲ್ಲಿ ನಾವು ಅಧಿಕಾರದಲ್ಲಿ ಮೆರೆಯುತ್ತಿದ್ದೇವೆ. ಅವರಿಗೆ ಕೃತಜ್ಞತೆಯನ್ನು ಸಲ್ಲಿಸಲು ಅವರ ಧ್ಯಾನ ಮಾಡಬೇಕು. ಅವರು ತೋರಿದ ದಾರಿಯಲ್ಲಿ ನಡೆದರೆ, ಬಾಬಾ ಭೀಮರು ಸಂತೋಷ ಪಡುತ್ತಾರೆ.

ಭೀಮರಾವ ನಿಮಗೆ ಸಮಯಾರು?
ನೀ ಕಲಿಯುಗದ ಮಹಾದೇವರು ॥ ಪ ॥

ಎಷ್ಟೋ ಯುಗದ ನೊಂದ ಬಡವರು
ತೊತ್ತಾಗಿ ದುಡಿದು ಮಡಿದ್ಹೋದ್ರು
ಏನು ಅರಿಯದ ಆ ಮುಗ್ಧ ಜನರು
ಕಣ್ಣೀರೊಳು ಸದಾ ಕೈ ತೊಳೆದವರು
ಯಾರು ಎಷ್ಟು ಕಾಡಿದರೂ
ಊರ ಹೊರಗೆ ಅಟ್ಟಿದರು
ತಡಿಯಲಿಲ್ಲ ಯಾವ ದೇವರು ॥ ಭೀಮ ರಾವ ॥

ಶ್ರೀಮಂತ ವರ್ಗದವರು
ನೊಂದ ಬಡವರಿಗೆ
ಪರಿಪರಿಯಾಗಿ ಪೀಡಿಸಿದರು
ಮನ ಬಂದಂಗೆ ಬಳಸಿ
ಕಷ್ಟ ಕೊಟ್ಟಿದರು
ನೀವೆ ಪರಿಶ್ರಮ ಪಟ್ಟಿದರೂ
ಯಾವ ಆಸ್ತಿ ಕೊಡಲಿಲ್ಲವರು
ಕಬ್ಬಿನ ಹಾಲ್ಹಿಂಡಿ ತಿಪ್ಪೆಗೆಸೆದರು ॥ ಭೀಮರಾವ ನಿಮಗೆ ॥

ಹನ್ನೆರಡನೇ ಶತಮಾನ
ಜನಿಸಿದ್ರೋ ಬಸವಣ್ಣ
ಮಾಡಿದ್ರೋ ಕುಲಕ್ಕೊಂದು ಶರಣ
ಹರಳಯ್ಯಾ ಮಧುವರಸದಲ್ಲಿ
ಲೆಕ್ಕಾಟ ವಾಗಿ ಅಂತರಜಾತಿ

೭೮. ಈಶ್ವರ ರಾವ ಎಂ. ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೮೫, ಪ್ರ.ವ.೧೯೯೭.

ಮದುವೆ ಮಾಡಿದರಣ್ಣ
ಆಗಿದ್ದ ಕೊಂಡ ಮಿಂಚಣ್ಣ
ಅಲ್ಲಿ ಎದುರಾದರಣ್ಣ
ಕ್ರಾಂತಿಯಾಗಿ ಇಡೀ ಕಲ್ಯಾಣ ॥ ಭೀಮರಾವ ಮಾಡಿ ॥[೩೯]

ಕಲಿಯುಗದ ಮಹಾದೇವರಾ ಭೀಮ ಬಾಬಾರಿಗೆ ಯಾರು ಸಮ ಇಲ್ಲ ಎಂದು ಅವರ ಬಗ್ಗೆ ಅಭಿಮಾನದಿಂದ ಹೇಳಲಾಗಿದೆ, ದಲಿತರು ಏಳು ತಿಳಿಯಮವಾಗಿ ಕಣ್ಣೀರಿನಲ್ಲಿ ಕೈ ತೊಳೆಯುತ್ತಿದ್ದರು. ತಮ್ಮ ಮೇಲೆ ಅನ್ಯಾಯವಾಗುತ್ತಿದೆ ಎಂಬ ಅರಿವು ಅವರಿಗೆ ಇರುತಿರಿಲಿಲ್ಲ. ಇದ್ದರೂ ವಿರೋಧಿಸುವ ಶಕ್ತಿ ಇರಲಿಲ್ಲ. ಇಂಥ ಸಂದರ್ಭದಲ್ಲಿ ಬಸವಣ್ಣರು ಬಂದು ಸಮಾನತೆ ಸಾರಿದರು. ಅವರು ಅಂತರ ಜಾತಿ ವಿವಾಹ ಮಾಡಿಸಿದರು ಆದ ಕಾರಣ ಕಲ್ಯಾಣದಲ್ಲಿ ಕ್ರಾಂತಿಯೇ ಉಂಟಾಯಿತು.

ಭೀಮರಾವ ಧರೆಗಿಳಿದು
ನಿಸ್ವಾರ್ಥದ ದುಡಿದು
ಯಾರಿಂದಾಗದ ಕಾರ್ಯ
ಮಾಡಿದರು
ಸರ್ವಧರ್ಮ ತಿಳಿದು
ಗೊಳ್ಳುಧರ್ಮ ತುಳಿದು
ನೀರು ಮಾನವ ಧರ್ಮ ಸೇರಿದರು
ನಿಜಮಾನವ ಧರ್ಮ
ಶ್ರೇಷ್ಠ ಬೌದ್ಧ ಧರ್ಮ
ಶ್ರೇಷ್ಠ ಮಾರ್ಗ ತೋರಿಹೋದರು ॥

ಸದಾ ಅತ್ತೆಕಾಲ
ಶಾಶ್ವತ ಉಳಿಯೊದಲ್ಲ
ಚಕ್ರದ ಸುಳಿಯಲ್ಲಿ ವಿಶ್ವವೆಲ್ಲ
ನಿಜತತ್ವ ತಿಳಿರೆಲ್ಲ
ಸಮೀಪದ ಅಳಿಗಾರ
ಸೊಳ್ಳುಹಾರಿ ಒಳ್ಳೆಬೀಜ ಭೂಮಿಮ್ಯಾಲ
ದಾಸಮೌನರ ಶಿಶುವು
ಭೀಮರಾಯರ ಉಸಿರು
ಸದಾ ಬೌದ್ಧಧರ್ಮದ್ದಂಬು । [೪೦]

ಭೀಮರಾಯರು ಬಂದು ಯಾರಿಂದಲೂ ಆಗದ ಕಾರ್ಯವನ್ನು ಮಾಡಿದರು. ನಿಜಧರ್ಮವಾದ ಬೌದ್ಧಧರ್ಮದ ಮಾರ್ಗ ತೋರಿಸಿದರು, 'ಸತ್ತಾ ಅತ್ತೆ ಕಾಲ' ಶಾಶ್ವತ ಉಳಿಯೊದಿಲ್ಲ ಎಂಬ ನುಡಿಯಲು 'ಯಾವಾಗಲೂ ಶೋಷಣೆ ಇರುವುದಿಲ್ಲ ಎಂದು ಸಾರುತ್ತದೆ. ಶೋಷಣೆಯ ನಾಶವಾಗುವ ಕಾಲ ಬರುತ್ತದೆ. ಒಳ್ಳೆಯ ಬೀಜ ಬೆಳೆ ಭೂಮಿ ಮೇಲೆ ಬೆಳೆಯುತ್ತದೆ.

ಕ್ರಾಂತಿಯ ಕಣ್ಣಣಿ
ಭೀಮದೇವ ನೀ

---

೩೯. ಈಶ್ವರ ರಾವ ಎಂ. ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೩೩, ಪ್ರ.ವ.೧೯೯೩

೪೦. ಅದೇ ಪು.೩೯

ಅದ್ಭೂತ ಮಾನವ
ಶಿಲ್ಪಿ ಶಿಖಾಮಣಿ
ಅಧ್ಭೂತ ಘಟನಾ
ಶಿಲ್ಪಿ ಶಿಖಾಮಣಿ ॥ ಪ ॥

ಅನ್ಯಾಯ ವೆಸಗದ ರಾಜಕಾರಣಿ
ಛೀದ್ರ ಭಾರತದ ನೀರ್ಮಾಪಕ ನೀ ॥ ಕಾಂತ್ರಿಯ ॥

ನಿಜಾಂಶವನ್ನು ಅರಿತ ರಾಷ್ಟ್ರಾಭಿಮಾನಿ
ಸವರ್ಣೀಯ ನೀತಿ ಅಳಿಸಿದಾತ ನೀ
ಕ್ರಾಂತೀಯ . . .

ಮೂಡಮಾನವರ ಗರ್ವ ಮುರಿದಿನಿ
ಅಂದ ಮಾನವರ ಅಜ್ಞಾನ ಕಳೆದಿನಿ ॥ ಕಾಂತ್ರಿಯ ॥

ಕಾಲಕಾಲಕ್ಕೆ ಅವತಾರ ತಾಳಿ ನೀ
ಅಜ್ಞಾನ ಜನರಿಗೆ ಜ್ಞಾನ ಕೊಡಿಸಿ ನೀ ॥ ಕಾಂತ್ರಿಯ ॥
ದಾಸ ಮೌನರ ಶಿಶುವಿಗೆ ನಿಮ್ಮ ಸ್ಮರಣೆ
ದೆಯ ಮಾಡೋ ಪುನಃ ನೀ ಅಂತಕರುಣೆ ॥ ಕಾಂತ್ರಿಯ ॥[೮೧]

ಕಾಲಕಾಲಕ್ಕೆ ಪವಾಡ ಮರಷ, ಅವತಾರ ಪುರುಷರಾಗಿ ಬಂದು, ಅಜ್ಞಾನ ಕೋಡು ಎಂದು ಮೇಲಿನ ಹಾಡಿನ ಮೂಲಕ ಪ್ರಾರ್ಥಿಸಲಾಗಿದೆ. ೧೨ ಶತಮಾನದ ಕ್ರಾಂತಿಕಾರರು ವಚನಕಾರರು ಆದರೆ ಆಧುನಿಕ ಯುಗದ ಕ್ರಾಂತಿಕಾರ ಬಾಬಾ ಸಾಹೇಬರು, ಅವರು ಅದ್ಭುತ ಮಾನವ, ಕ್ರಾಂತಿಯ ಕಣ್ಮಣಿ, ಶಿಲ್ಪಿ (ಸಂವಿಧಾನ) ಶಿಖಾಮಣಿ. ಅದ್ಭುತ ಘಟನೆಯನ್ನು ನಿರ್ಮಿಸಿ, ಅದನ್ನು ಎದುರಿಸಿ ಧೀರವಾದಿಯಾಗಿದ್ದಾರೆ. ಅವರು ಜನರ ಹಿತಕ್ಕಾಗಿ, ಅನ್ಯಾಯ ಸಹಿಸದ ರಾಜಕಾರಣಿ.

ಭಾರತ ಸರ್ಕಾರ ನಾವೇ
ನಡೆಸಿದ ಜೈ ಭೀಮನಾಥನೇ
ಭೀಮರ ಲೆಯ ಪ್ರೀತಿಯ
ಪುತ್ರ ಅಂಬೇಡಕಾರನೇ ॥ ಪ ॥

ಜನ್ಮ ಕೊಡಿಸಿದ ನೀ ಮಹಾಯೋಗಿ
ಒಡಕು ಭಾರತದ ಐಕ್ಯತೆಗಾಗಿ
ಹಿಂದುಳಿದ ನಿನ ರಾಷ್ಟ್ರದ
ಉದ್ಧಾರ ಮಾಡೋದಕ್ಕಾಗಿ
ಬಡತನದಲ್ಲಿ ಜನಿಸಿದ
ಅವತಾರಿಕ ಮರುಷ ॥ ಭಾರತ ಸರ್ಕಾರ ॥

ಹಾರವ ಬರುವಾಗ ಜನಿವಾರ ವಿತ್ತೆ?
ಶಿವಲಿಂಗ ಬರುವಾಗ ಶಿವದಾರ ವತೇ?

---

೮೧. ಈಶ್ವರ ರಾವ ಎಂ. ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೭೫, ಪ್ರ.ವ.೧೯೯೭

ತಮ್ಮ ತಮ್ಮಲೆ ಕಾದಾಡಿದ ಮೇಲೆ
ಹೇಗಾದಿತ್ತು ನಿಮ್ಮ ಐಕ್ಯತೆ?
ಬಿಡುವ್ಹೊ ನಿಮ್ಮ ನೀಚತೆ ॥ ಭಾರತ ಸರ್ಕಾರ ॥
ಪ್ರತಿಯೊಬ್ಬ ಮಾನವ ಬತ್ತಲೆಂದು
ಏಕೆ? ತಿಕ್ಕಾಟ ಮೇಲುರೇಳೆಂದು
ಬರೆ ಭಮಗಾಗಿ ಬಳಗಾದೆ
ಯಾವದಾ ಗೊದಲ್ಹೊ ನಿಂಡ
ಮಾನವಕುಲವೇ ಬಂದು
॥ ಭಾರತ ಸರ್ಕಾರ ॥

ದೊಡ್ಡ ಹಳ್ಳಿಖೇಡ ಗ್ರಾಮದ ಕವಿತೆ
ದಾಸ ಮೌನರು ಎಲ್ಲರ ಮಾಹಿತೆ
ಅವರ ಕಿರಿಯ ಮಗಕೂಗಿ
ಹೇಳಿದ ಶುದ್ದುಗಲಿ ನಿಮ್ಮ ನಡತೆ
ಬಿಡುವ್ಹೋ ನಿಮ್ಮ ನೀಚತೆ ॥ ಭಾರತ ಸರ್ಕಾರ ॥[೮೨]

'ನಾವೇ' ಎಂದರೆ ಇಲ್ಲಿ ಸೂತ್ರದಾರ ಸಮಾನ್ಯವಾಗಿ ನಾವೇ ಎಂಬ ಪದದ ಅರ್ಥ ದೋಣಿ ಅಂದರೆ ಭಾರತ ಸರ್ಕಾರ ದೋಣಿಯನ್ನು ಐಕುತೆಗಾಗಿ, ಹಿಂದುಳಿದವರ ಉದ್ದಾರ ಮಾಡಿದ್ದಾರೆ. ನಮ್ಮಲ್ಲಿಯ ತಿಕ್ಕಾಟ, ಮೇಲು–ಕೀಳು ಬಿಟ್ಟರೆ, ದೇಶವು ಐಕ್ಯತೆ ಹೊಂದುತ್ತದೆ

ಜಯ ಜಯ ಭೀಮ ಬುದ್ಧ ಗೌತಮ
ಎಷ್ಟೋ ರುಚಿ ಭೀಮ ನಾಮ ಬುದ್ಧ ಪೂರ್ಣಿಮ ॥ ಪಲ್ಲ ॥

ಚೇಡ–ಭಾರತದೊಳು ಒಂದು ದಲಿತರು ಒಂದು ಕೊಡಿರಿ
ಬುದ್ಧ ಭೀಮವರ ನಾಮವ ನುಡಿದು ವಿಧ್ಯ ಕಲಿತು ಮುಂದು ॥ ಜಯ ॥

ಬೃಹ್ಮಂಡ ಬಂದ ಭೂಲೋಕ ಅಂದ
ಪರ ಲೋಕದಿಂದ ಭೀಮ ಬಾಬ ಬಂದ
ನರಜನಕ್ಕೆ ನೀ ಬಂದಿ ಈ ಸಂಸಾರ ಏನಿಲ್ಯಂದಿ ಬುದ್ಧ ಧರ್ಮ ನಮ್ಮದೆಂದಿ
ಬುದ್ಧ ಧರ್ಮದ ಜಯಕೆ ಇಲ್ಲದವ ಥೇಟ ಅಡಹಂದಿ ॥ ಜಯ ॥
ಸಾದು ಸಂತ ವೆಂದಿ ಇನ್ನೂ ಹಿಂದೆ ಉಳಿದಿ
ಹಣೆಯ ಮೇಲೆ ಮೂರು ಪಟ್ಟಿ ಬುದ್ಧಿಯ ಬಡದಿ
ಜ್ಞಾನೋದಯದ ಶುದ್ಧಿ ನಿತ್ಯ ಬಯಕೆಯು ಬುದ್ಧಿ
ಬುದ್ಧನ ಮಾರ್ಗಕ್ಕೆ ಹೊಂದಿ
ಬುದ್ಧ ದೇವನ ದರುಶನ ಪಡಿರಿ ಮಾಡು ಬ್ಯಾಡೊ ನೀದಿ॥ ಜಯ ॥

ಬುದ್ಧರ ಹಾದಿ ಭಾರತದ ತಳಹದಿ
ಎರಡು ಸಾವಿರದ ಐದು ನೂರ ವರಷದಿ
ಹಿಂದು ಧರ್ಮಕ್ಕೆ ಮರುಗಿ ದಲಿತರೆಲ್ಲರು ಕರಗಿ ಗೋಡೆಗೆ ಕುಂತಿರಿ ವರಗಿ

೮೨. ಈಶ್ವರ ರಾವ ಎಂ. ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೭೩, ಪ್ರ.ವ.೧೯೯೭

ಮಾಣಿಕರ ಮಾತು ಮನ್ನಿಸಿ ನಡಿರಿ ಬುದ್ಧ ತತ್ವತಿರುಗಿ ॥ ಜಯ ॥ [೮೩]

ಪೂರ್ಣಿಮಯ ಸಮನಾರ್ಥಕ ಪದ ಹುಣ್ಣಿಮೆ, ಚಂದ್ರ ಕತ್ತಲ ತೋಕಕ್ಕೆ ಬೆಳಕಾಗಿ ಬಂದು ಸುಂದರತೆ ನೀಡುತ್ತಾನೆ ಹಾಗೆ ದಲಿತರ ಕತ್ತಲೆ ಲೋಕಕ್ಕೆ ಬುದ್ಧ-ಬಸವ, ಭೀಮರು ಉಜ್ಜಲ ಬೆಳಕಾಗಿ ಬಂದರು, ಬುದ್ಧ-ಬಸವ-ಭೀಮರ ನಾಮವು ಕೇಳಲು ಸುಗಂಧ, ಸ್ವಾದೀಷ್ಟವಾಗಿ ಅವರ ಕಾರ್ಯಗಳು ಲೋಕ ತುಂಬೆಲ್ಲಾ ಹರಡಿದವು. ಇಡೀ ಬ್ರಹ್ಮಾಂಡದಲ್ಲಿ ಭೂಲೋಕ ಅಂದವಾಗಿದೆ. ೨೫೦೦ ವರ್ಷಗಳಿಂದ ಹಿಂದೂ ಧರ್ಮದಲ್ಲಿ ಮರುಗಿದ ದಲಿತರಿಗೆ ಮಾರ್ಗ ತೋರಿಸಿದವರು, ಬುದ್ಧ-ಬಸವ, ಭೀಮ ಎಂಬ ಮಹಾನ್ ತ್ರೀವಳಿಗಳು.

ಬುದ್ಧ ಭೀಮ ಬಾಬಾ ದೇವರ
ಅಂಬೇಡ್ಕರ ಅವುತಾರ ॥ ಪ ॥
ಜಯ ಭೀಮ ದಾತಾ ಭಾರತದ ನೇತಾ
ಹುಟ್ಟಿ ಬಂದಿ ದೇವ ಅಂಬೇಗಾಂವ
ಹುಟ್ಟಿ ಹೂಡಿದಿಯಾ ಪಂಥವ ॥ ಅಂಬೇಡ್ಕರ ॥

ಪಂಥವು ಹೂಡಿಯು ಹಿಂದು ಧರ್ಮಕ್ಕೆ
ಮಾಡಿ ನೋಡಿದಿಯೆ ಭಾರತಕ್ಕೆ
ಭಾರತೀಯ ದಲಿತಕ್ಕೆ ॥ ಅಂಬೇಡ್ಕರ ॥

ಧಮ್ಮ ಪದ ಓದಿ ಹಿಡಿ ತಮ್ಮ ಹಾದಿ
ಹಿಂದೂ ಧರ್ಮ ಹಿಡಿದು ಆದಿ ಬ್ರಬಾದಿ
ಮಾಣಿಕರ ಪದ್ಯ ಓದಿ ॥ ಅಂಬೇಡ್ಕರ ॥ [೮೪]

ಭೀಮ ಬಾಬಾ ಸಾಹೇಬರು ಬುದ್ಧ ದೇವರ ಅವತಾರ ಪುರುಷರು, ಧಮ್ಮ ಪದ ಓದಿ, ತಮ್ಮ ನಿಜಮಾರ್ಗದ ಹಾದಿ ಹಿಡಿಯಬೇಕು, ಹಿಂದೂ ಧರ್ಮ ಮಾರ್ಗ ಹಿಡಿದರೆ, ನಾಶವಾಗುವರು, ಆದರಿಂದ ಬೌದ್ಧ ಧರ್ಮದ ಮಹತ್ವ ಅರಿತು, ಬೌದ್ಧ ದೀಕ್ಷೆಯನ್ನು ಪಡೆಯ ಬೇಕು.

ಭಾರತ ಜ್ಯೋತಿ ನಮ್ಮ ಭೀಮದೇವಾ
ಮಾನವ ತತ್ವವು ತಿಳಿಸಿರುವ ॥ ಪಲ್ಲ ॥

ಒಂದೇ ಮಾತಾ ಒಂದೇ ರಕ್ತ ಒಂದೇ ಭಾರತ ಜನತಾ
ಒಂದೇ ನುಡಿ-ನುಡಿ ಸಂಪೂರ್ಣವಾ
ಮಾನವಾ ತತ್ವವು ತಿಳಿಸಿರುವಾ ॥ ೧ ॥
ಉತ್ಪನ್ನ ಒಂದೇ ರಕ್ಷಣಾ ಒಂದೇ ಜೀವನ ಲಯಾಕೃತಿ ಒಂದೇ
ಕುಲ ಎಣಿಸುವ ಕುಲಗೇಡಿ ಇರುವಾ
ಮಾನವ ತತ್ವವು ತಿಳಿಸಿರುವ ॥ ೨ ॥ [೮೫]

ನಮ್ಮ ಭಾರತದ ಜ್ಯೋತಿಯಾದ ಭೀಮದೇವರು, ಮಾನವ ತತ್ವ ತಿಳಿಸಿದರು. ಇವರಿಗೂ ಭಾರತ, ಒಂದೇ ಆಗುವ ಎಲ್ಲರಲ್ಲಿಯೂ ಐಕ್ಯತೆ ಭಾವ ಮೂಡಿ ಬರಲಿ ಎಂಬ ಆಶಯ ವಿತ್ತು, ಕಾರಣ ಇದರಿಂದ ದಲಿತರೆಲ್ಲರೂ ಒಂದು ಗೂಡುವರು, ನಮ್ಮ ಒಂದೇ ರಕ್ತ, ಭಾರತ ಜನತಾ, ಒಂದೇ ನುಡಿ-ನುಡಿ ಸಂಪೂರ್ಣತಾ ಭಾವ ಇರಬೇಕು. ಒಂದೇ ರಕ್ಷಣೆ, ಜೀವನದ ಲಯಾಕೃತಿ ಹೊಂದಿರುತ್ತದೆ.

---

೮೩. ಕೆ.ಎಸ್.ಮಾಣಿಕರಾವ ಗವಾಯಿ (ಲೇ) ಭೀಮ್ಮ ಲೀಲಾ ಗೀತೆಗಳು ಪು.೨೧

೮೪. ಅದೇ ಪು.೨೨

೮೫. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಅರ್ಜುನರಾವ ಹಾರೋರಗೀರಿ, ಬೀದರ ದಿ: ೨೦-೦೭-೦೯ ರಂದು ಭೇಟಿ.

ಜ್ಞಾನಗಳಿದಿ ಭೀಮ
ಬಂದ್ರೋ ಭಾರತಕ್ಕೆ ಓಡಿ
ಹಿಂದುಳಿದ ದಲಿತರ
ಸಂಘಟನೆ ಮಾಡಿ
ಅಧರ್ಮದ ತತ್ವಗಳು
ಬುಡ ಮೇಲು ಮಾಡಿ ॥

ಮಹದ ನಗರದಲ್ಲಿ
ಮಹಾ ಸಭೇ ಕೂಡಿ
ನೌಕೋಟಿ ದಲಿತರ
ಮಧ್ಯ ಚರ್ಚೆ ಮಾಡಿ
ಪೊಳ್ಳು ಮನೋಶಾಸ್ತ್ರವು
ಸುಟ್ಟು ಬೂದಿ ಮಾಡಿ ॥ [೮೬]

ಬಾಬಾ ಸಾಹೇಬರು ಅಧರ್ಮ ತತ್ವ ಬುಡ ಮೇಲುಮಾಡಿ ತ್ರಿವಳಿ ಸೂತ್ರಗಳ ಮಹತ್ವ ಸಾರಿದರು ಒಂಬತ್ತು ಕೊಟ್ಟಿ ದಲಿತರ ಮಧ್ಯ ಚರ್ಚೆ ಮಾಡಿದರು ಪೊಳ್ಳು ಮನೋಶಾಸ್ತ್ರ ಸುಟ್ಟ ಬುದಿ ಮಾಡಿದರು ಎಂದು ಬಾಬಾ ಸಾಹೇಬರ ಸಾಧನೆಯನ್ನು ಮೇಲಿನ ಹಾಡಿನಲ್ಲಿ ವರ್ಣಿಸಲಾಗಿದೆ.

ನೀ ನಾರಿಗಾದಿ ಓ ಮಾನವ
ನಿಜತತ್ವ ತಿಳಿಯದ್ಹೋದಿ
ಬರೇನ್ಯರ್ಥವಲ್ಲ ದಿನಕಳೆದಿ
ನಿಜಮಾನವನಾಗದ್ಹೋದಿ

ಭಾರತ ಭೂಮಿಯ ಒಂದು
ಮೂಲೆಯಲ್ಲಿ ಹುಟ್ಟಿ
ಬಡತನದಲ್ಲಿ ಅತೀ
ಕಷ್ಟನಷ್ಟವು ಪಟಿ
ಬಡಜನಕ್ಕಾಗಿ ಭೀಮಾರಣ್ಣೆರಿಟ್ಟ
ನೀನಾರಿಗಾದಿ

ಇಡೀ ಭಾರತಾಂಬೆಯ
ಕಷ್ಟವ ನೋಡಿ
ಹಣಗುಣಗಳ ಮಧ್ಯ
ತೂಕವ ಮಾಡಿ
ಜ್ಞಾನಕ್ಕಾಗಿ ಭೀಮರಾಯ
ಹೋರದೇಶ ಓಡಾಡಿ
ನೀನಾರಿಗಾದಿ . . . . . [೮೭]

---

೮೬. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಅರ್ಜುನರಾವ ಹಾರೋರಗೇರಿ, ಬೀದರ ದಿ: ೨೦-೦೭-೦೯ ರಂದು ಭೇಟಿ.
೮೭. ಈಶ್ವರರಾವ ಎಂ.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೭೦, ಪ್ರ.ವ.೧೯೯೭

ನೀ ಯಾರಿಗೆ ಆದೆ ಮಾನವ, ನಿಜತತು ತಿಳಿಯಲ್ಲಿಲ್ಲ, ವ್ಯರ್ಥದಲ್ಲಿ ದಿನ ಕಳೆದರೆ, ನಿಜಮಾನವ ಆಗೋದು ಯಾವಾಗ, ಬಡತನ ಮನೆಯಲ್ಲಿ ಭೀಮ ಹುಟ್ಟಿದರೂ ಸಹಾ ಅವರ ಕಾರ್ಯಗಳಿಂದಾಗಿ ಅವರು ಇಂದಿಗೂ ಶ್ರೀಮಂತರಾಗಿದ್ದಾರೆ.

ಬದ್ದಗುಣ ಗುದ್ದಾ ಡಬ್ಯಾಡೊ
ಗುಣನೋಡಿ ಗುರುವಿನ ಸಂಘಮಾಡೋ

ಮರುವಿಗೆ ಬೇಕು ಅರಿವು
ಅರಿವಿಗೆ ಬೇಕು ಗುರುವು
ಗುರುವಿನಿಂದ ಅರಿವಾದಾಗ
ಭವದ ಪರಿಹರವು
ಬದ್ದಗಣ . . .

ಶರಣಾದ ಶೀಷ್ಯರಿಗೆ
ಅನುಗ್ರಹ ಮಾಡಿದಡೆ
ತಿರುಗಿ ಅವನ ಮನೆದಿ
ಉಣಬಾರದೆಂದವಗೆ
ಬದ್ದ ಗುಣ . . .

ಅಟ್ಟನ್ನ ಒಲ್ಲೆಂದು
ಅಕ್ಕಿ ಬೇಡಿಕೊಂಡು
ಕೊಂಡೊಯ್ಯೊ ಗುರುವಿನಕಂಡು
ಗಾಣದೊಳಹಾಕ್ತಿಂಡು
ಬದ್ದ ಗುಣ . . .

ನೀತಿಳಿದು ಗುರುಮಾಡು
ಕಳೆವುದು ಭವದ ಕೇಡು
ಪಂಚಶೀಲವು ಪಾಡು
ನುಡಿದಂಗ ನಡೆದುನೋಡು
ಬದ್ದ ಗುಣ . . .

ನಿಜತತ್ವದಿ ಮನಸ್ಹಾಕು
ಮೂಡ ನಂಬಿಕೆ ತೆಗೆದ್ಹಾಕು
ದಾಸಮೌನರ ಶಿಶುವು
ಕಂಡು ಬುದ್ಧನ ಬೆಳಕು
ಬದ್ದ ಗುಣ . . . [೮೮]

---

೮೮. ಈಶ್ವರರಾವ ಎಂ.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೪೪, ಪ್ರ.ವ.೧೯೯೭

ಈ ಹಾಡಿನಲ್ಲಿ ಗುರು ಭಕ್ತಿ ಕುರಿತು. ಗುಣ ನೋಡಿ ಗುರುವಿನ ಸಂಘಮಾಡಬೇಕು. ಗುರುವಿನಿಂದ ಅರಿವು ಪಡೆದು ಭವದಲ್ಲಿನ ಸಮಸ್ಯೆ ಪರಿಹಾರ ಮಾಡಬಹುದೆಂದು, ಮೇಲಿನ ಹಾಡಿನ ಮೂಲಕ ಗುರು ಭಕ್ತಿಯ ಮಹಿಮೆ ಹೇಳಲಾಗಿದೆ.

ಬುದ್ಧ ನಾಬಂದೆ
ನಿಮ್ಮ ಸೇವೆಗೆಂದೆ
ಕರುಣಾದಿ ಕಾಪಾಡೊ
ಈ ಭವದಿ ಮುಂದೆ

ನಾಲ್ಕು ಭೂತಖಾಯ
ಸ್ಥಿರವಿಲ್ಲ ತಳಪಾಯ
ಮೋಹಿಸಿ ಕುಂತೆ ಮಾಯ
ಮಿಥ್ಯಜ್ಞಾನೋದಯ
ಆ ಆ ಆ ಆ ಆ ಆ ಆ ಆ
ಬುದ್ಧನಾಬಂದೆ

ಪ್ರಪಂಚದ ಮಾಟ
ಬರೆ ಡೊಂಬರಾಟ
ನುಡಿದಂತೆ ನಡೆಯುವದಿಲ್ಲ
ವ್ಯರ್ಥ ಭಂಡಾಟ
ಆ ಆ ಆ ಆ ಆ ಆ ಆ ಆ
ಬುದ್ಧನಾಬಂದೆ . . .

ಮನಶುದ್ಧ ಮಾಡು
ಶುದ್ಧ ವಿಚಾರನೀಡು
ಪಂಚಶೀಲ ಕೊಂಡಾಡು
ಭವಷ್ಯ ಭವ್ಯನೋಡು
ಆ ಆ ಆ ಆ ಆ ಆ ಆ ಆ
ಬುದ್ಧ ನಾ ಬಂದೆ . . .

ಚಿಂತನೆ ಮಾಡು
ಸಂತೆ ಮಹಿಮೆನೋಡು
ಸತ್ಯ ಮಿಥ್ಯ ಅರಿವಾದೊಡೆ
ಮಿಥ್ಯ ತ್ಯಾಗಮಾಡು
ಆ ಆ ಆ ಆ ಆ ಆ ಆ ಆ
ಬುದ್ಧ ನಾ ಬಂದೆ . . .

ಕಾಯವಾಚಾ ಮನಸಿನ ಕಂತೆ
ಇರೋತನ ನಮ್ಮ ನಿಮ್ಮಯ ಸಂತೆ
ದಾಸಮೌನರ ಶಿಶು ನಿಮ್ಮಂತೆ

ಬುದ್ಧನ ನಂಬಿ ಶುದ್ಧಾದನಂತೆ
ಆ ಆ ಆ ಆ ಆ ಆ ಆ ಆ
ಬುದ್ಧ ನಾ ಬಂದೆ . . .[೫೯]

ಬುದ್ಧ ಕರುಣೆಯಿಂದ ಕಾಪಾಡೊ ಎಂಬ ನುಡಿಯ ಭಕ್ತಿಯ ಪ್ರಾರ್ಥನೆಯನ್ನು ಪ್ರತಿಬಿಂಬಿಸುತ್ತದೆ. ನಾಲ್ಕು ಭೂತಖಾಯ ಸ್ತಿರವಿಲ್ಲ ತಳವಾಯ ಮಿಥ್ಯ ಜ್ಞಾನ್ಕಕೆ ಮೋಹಿಸಿ ಕುಂತೆನು, ಬುದ್ಧ ನಿಮ್ಮ ಸೇವೆ ಮಾಡಿ ಮೋಹ ಬಂಧನೆದಿಂದ ಮುಕ್ತ ಹೊಂದ ಬೇಕು. ಸತ್ಯ ಮಿಥ್ಯ ಅರಿವಾದೊಡನೆ, ಮಿಥ್ಯ ತ್ಯಾಗ ಮಾಡಬೇಕೆಂದು ಮೇಲಿನ ಹಾಡಿನ ಆಶಯವಾಗಿದೆ.

ಓ ಓ ಓ ಭಾರತ ಭೂಮಿಗೆ ಇಳಿದು ಭೀಮ ಇಳಿದು
ಭಾರತಾಂಬೆಯ ಕತ್ತಲಕಳೆದು
ಭೀಮದೇವನೆಂದು ಬಿರುದು ಪಡೆದು.

ಕಾಲಾನುಕಾಲ ಮಾನವರುದ್ಧರಕ
ಆದೇವ ಇಳಿದ ಬೇರೆಬೇರೆ ಅವತರಕ
ಬಾಯಿ ಮಾತಿನಿಂದ ಕೇಲದಿದ್ದಕ
ಭೀಮನವತರದಲ್ಲಿ ಬಂದ ಭೂಲೋಕ
ಸಂವಿಧಾನವು ಬರೆದ
ಭೀಮದೇವನೆಂದು ಬಿರುದು ಪಡೆದ
ಓ ಓ ಓ ಭಾರತ . . .[೬೦]

ಭಾರತ ಭೂಮಿಗೆ ಭೀಮ ಇಳಿದು ಬಂದು ಭಾರತಾಂಬೆಯ ಕತ್ತಲನ್ನು ಕಳೆದರು. ಸಂವಿಧಾನ ಬರೆದು ಭೀಮ ದೇವನೆಂದು ಬಿರುದು ಪಡೆದರು, ಕಾಲಾನುಕಾಲದಿಂದಲ್ಲೂ ಮಾನವರ ಉದ್ಧಾರಕ್ಕಾಗಿ ಬೇರೆ ಬೇರೆ ಅವತಾರ ಪಡೆಯುವರು, ಬಾಯಿ ಮಾತಿನಿಂದ ದಲಿತರು ಕೆಳದಿದ್ದಕ್ಕೆ ಭೀಮನವತಾರದಲ್ಲಿ ಭೂಲೋಕಕ್ಕೆ ಬಂದರು, ಎಂಬ ಮೇಲಿನ ಗೀತೆಯಲ್ಲಿ ದಲಿತರ ಕುರಿತು ಬಾಬಾಸಾಹೇಬರಿಗೆ ಇದ್ದ ಕಾಳಜಿ ವ್ಯಕ್ತವಾಗುತ್ತದೆ.

ಪ್ರಾರಂಭಿಸಿ ನವಜೀವನ
ಮರೆಯಬೇಡಿರಿ ಭೀಮಬಾಬನ
ಮರೆಯಬೇಡಿರಿ ಭೀಮಬಾಬನ
ಹಿಂದುಳಿದ ಮಹಾದೇವನ

ಕೋಲಂಬೋಜರ್ಮನಿ ಲಂಡನಖ್ಹೋಗಿ
ಭೀಮ ಏತಕ್ಕಾಗಿ ?
ಹೆಚ್ಚಿನ ವ್ಯಾಸಂಗಕ್ಕಾಗಿ
ದಿನರಾತ್ರಿಎನ್ನದೇ ಅಭ್ಯಾಸ
ಮಾಡಿ ಭೀಮಯಾರಿಗಾಗಿ ?
ಭಾರತ ಭವಿಷ್ಯಕ್ಕಾಗಿ
ತನುಮನಧನದಿಂದ ಸೇವೆ
ಗೈದರು ಭೀಮ ಬಡಜನಕ್ಕಾಗಿ

---

೫೯. ಈಶ್ವರರಾವ ಎಂ.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೪೫, ಪ್ರ.ವ.೧೯೯೭
೬೦. ಅದೇ ಪು.೫೦

ಕಣ್ಣು ತೆರೆದ ಯೋಗಿ
ಮರಿಬೇಡಪ್ಪ ಭೋಗಿ ಎಚ್ಚರಾಗಿ
ಪ್ರಾರಂಭಿಸಿ . . . [೯೧]

ಈ ಹಾಡಿನಲ್ಲಿ ಬಾಬಾ ಸಾಹೆಬರನ್ನು ಕುರಿತು ಭೀಮರನ್ನು ಮರೆಯದೇ ಅವರ ಆಶಯದಂತೆ ನವ ಜೀವನ ಆರಂಭಿಸಬೇಕು. ಆವರು ವಿದೇಶಕ್ಕೆ ಯಾರಿಗಾಗಿ ಹೋದುರು, ಸ್ವಾರ್ಥಕ್ಕಾಗಿ ಅಂತು ಖಂಡಿತ ಅಲ್ಲ. ಅವರು ನಮಗಾಗಿ ದಿನರಾತ್ರಿ ಎನ್ನದೇ ಅಭ್ಯಾಸ ಮಾಡಿದ್ದಾರೆ, ತನುಮನದಿಂದ ಭಾರತ ಭವಿಷ್ಯಕ್ಕಾಗಿ ಸೇವೆ ಮಾಡಿದ್ದಾರೆ.

ಎನ್ನ ಬಂಧುಗಳ
ಬುದ್ಧ ಧರ್ಮದ ಅಭಿಮಾನಿಗಳೆ
ಇನ್ನೂ ಎಷ್ಟು ದಿನ ಕಷ್ಟಗಳಿವಿರೆ
ನಿಮ್ಮ ಕಾಲಿನ ಮೇಲೆ ನೀವು ನಿಂತು
ನಿಮ್ಮ ಮೂಲ ಭೂತ ಹಕ್ಕು ನೀವು ಪಡಿಯಿರಿ.

ಭಾರತ ಬಡುವರ ದಸಿಂದ ಭೀಮ
ಬಾಬಾನ ಕಣ ಕಣ ದುಡಿದ
ಹಗಲಿರುಳೂ ನಿತ್ಯೆ ನಿಮಿಷ ನಿಮಷಕ್ಕೆ ನಮ್ಮ
ಚಿಂತ್ಯಾಗೆ ಸ್ವರಗಿದ, ಮರಗಿದ, ಕೊರಗಿದಾ
ಆದಿ ಮಾನವನ ಇತಿಹಾಸ ಶೋಧ
ಮಾಡಿ ಹಾದಿಗಿ ತಂದಿದರಿ
ಯಾರಶಕ್ತಿಲಿ ಅವರೇ ಮೇಲೆದ್ದು
ಹಿಂದುಳಿದ್ವರಿಗೆ ನೀವು ಸುಧಾರಿಸಿರಿ ! [೯೨]

ಪ್ರಸ್ತುತ ಹಾಡಿನಲ್ಲಿ ಬಾಬಾ ಸಾಹೇಬರು ದಲಿತರಿಗೆ ಏಳಿಗೆಯ ಕರೆ ನೀಡಿದ್ದಾರೆ. ಬುದ್ಧ ಧರ್ಮದ ಅಭಿಮಾನಿಗಳೇ ನನ್ನ ಬಂಧುಗಳೇ ಎಷ್ಟು ದಿನ ಕಷ್ಟ ಪಡುವಿರಿ. ನೀವು ಸ್ವಾಲಂಭಿಗಳಾಗಿ ಎಂದು ಕೂಗಿ ಹೇಳಿದ್ದಾರೆ.

ಬಾಬಾ ಅಂಬೇಡಕಾರ ಇವರೋ ದೇವರೋಳಗಿನ ಮಹದೇವರೋ
ಭೀಮಸೈನ್ಯ ದೇವಿಂದ್ರ, ಹಸ್ತಿನಾವತಿ ರಾಜೇಂದ್ರಾ

ಹೋ ... ಹೋ ... ಭಾರತದೊಳಗಿನ ಬಡ ಬಂಧುಗಳೇ
ಓಡಿ ನೀವು ಬನ್ನಿರಿ ಬಾಬನ ಭಜನೆ ಮಾಡಿರಿ
ಆತನೇ ನಮಗ ಅಮೃತ ಗುಡಸಿ, ಮಾಡಿ ಬಿಟ್ಟಿದ ಹುಸಿಯಾರಿ
ಆತನ ಹೊರತಾ ಬೇರ್ಯಾವ ದೇವರ್ ಬಾಬನ ಭಜನ ಭಜಿಸಿರಿ
ವಿದ್ಯೆಯ ಓದಿ ಜಯಸಿರಿ

---

೯೧. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಅರ್ಜುನರಾವ ಮು.ಹಾರೋರಗೇರಿ ಬೀದರ,ದಿ:೨೦-೦೭-೦೯ ರಂದು ಬೇಟಿ.

೯೨. ಅದೇ

ಹೋ-ಹೋ ಕಲ್ಲು ಕಟ್ಟಿಗೆ, ದೇವರೆಂದು ಎಲ್ಲ ಜನ ನಂಬಿರಿ
ಬಲ್ಲಂಗ ಭಾವಿಸಿ ಕೊಂಬಿರಿ, ಬಸವಣ್ಣ-ಹಣಮಂತ ದೇವರ
ಗುಡಿಯಾಗ, ಮುಟ್ಟಿ-ತಟ್ಟಿ ಶೀಲಾರಿ, ಮೇಲವರು ಹೋಗಿ ಕಟ್ಟಿ
ರಟ್ಟಿ ಹಿಡಿದು ಕೆಳಗಿಳಸಿದರಿ ಮುಟ್ಟಿ-ತಟ್ಟಿ
ಎಂದು ಬಡಕೊಂಡರಿ

ಹೋ - ಹೋ ಬೆಕ್ಕು ನಾಯಿ ಸಲುವಿರಿ
ಯಾವ ಕುಲದಾನು ತಂದಿರಿ, ಮಲ ಮಾತರ ಅವು ತಿಂದವರಿ
ಢೋರೆರ ನಾಯಿ ದೇವರ ತಲಿ ಮ್ಯಾಲ ಕಾಲೆತ್ತಿ ಮೂತ್ರ ಮಾಡಿತರಿ
ಶೀಲ ಮಾಡುವರು ಚತುರ್ದಶಿಗೆ ತೆಂಗು ಒಡೆದು ತಿಂದಿರಿ. [೯೩]

ಭೀಮ ಸೈನ್ಯಕ್ಕೆ ದೇವಿಂದ್ರನಂತಿರುವ ಬಾಬಾ ಸಾಹೇಬರು ದೇವರೊಳಗಿನ ಮಹಾದೇವರಾಗಿದ್ದಾರೆ. ದಲಿತರೇ ನೀವು ಬನ್ನಿರಿ ಬಾಬನ ಭಜನೆ ಮಾಡಿರಿ, ಎಂದು ದಲಿತರಿಗೆ ಭಜನಾ ಮಹತ್ವ ಹೇಳಲಾಗಿದೆ. ಭೀಮರು ನಮಗೆ ಅಮೃತ ಕುಡಿದ ಅವರನ್ನು ನಮಗೆ ಬೇರೆ ಯಾವ ದೇವರಿಲ್ಲ ಎಂದು ಬಾಬಾ ಬಗ್ಗೆ ದಲಿತರ ಅಚಲ ಭಕ್ತಿ ಮೇಲಿನ ಹಾಡಿನಲ್ಲಿ ವ್ಯಕ್ತವಾಗಿದೆ.

ಭೀಮ ಗರ್ಜನಾ ಬುದ್ದ ದರುಶನಾ
ಕೋಟಿ ಕೋಟಿ ಮಾನವರನ್ನು ಮಾಡಿ ಪಾವನಾ

ಎಲ್ಲರ ಹಣೆಬರ ಬರದಾನ ಅಂತಿರಿ ಬ್ರಹ್ಮಾ
ಅದೇ ಬ್ರಹ್ಮಾನ ಹಣೆಬರಹ ಯಾರು ಬರದಾರ ಹೇಳೊ ತಮ್ಮಾ
ಭಾರತ ಜನಾಂಗ ಹಣೆಬರಹ ಬರದ ಅಂಬೇಡಕರ ಭೀಮಾ
ಮಾಡಿ ಸರಿಸಮಾನಾ ಹಿಂದು ಸ್ಥಾನಾ, ವಂದೇ ಮಾತರಮ್

ರುದ್ರಾವತಾರ ದೇವರಂತಿರಿ ಕೈಯಲ್ಲಿ ಹಿಡಿದ ತ್ರಿಶೂಲಾ
ಎಷ್ಟೋ ಮಾನವ ಪ್ರಾಣಿಗಳಿಗೆ ಕೊಲೆ ಮಾಡಿದನಲ್ಲಾ
ಜೀವ ಹಿಂಸೆ ಮಾಡಿದವರು ದೇವರಾಗೊದಿಲ್ಲ
ಅಹಿಂಸಾದ ನೇಮ, ಬೌದ್ದ ಧರ್ಮ ತಿಳಿದ ಬಾಬಾ !

ಭಗವಾನ ಬುದ್ದನ ಧರ್ಮ ತಿಳಕೊಂಡವ ಮಹಾತ್ಮಾ
ಅಶೋಕಪತಿ ಅಂಗೋಲಿಮಾಲಾ ಸಿದ್ಧಾರ್ಥ ಪ್ರಭು ಗೌತಮ
ಸತ್ಯೆ ಮುಕ್ತಿ ಮಾರ್ಗವ ತೋರಿದಾ ಅಧುನಿಕಾ ಭೀಮಾ
ಗಾಂಧಿಗೆ ಉಳಿಸಿದ ಪ್ರಾಣಾ,
ಸ್ವರಾಜ್ಯ ಪೂರ್ಣ ಮಾಡಿದ ರಕ್ಷಣಾ

ಹಿಂದಿನ ಜನ್ಮದ ಪುಣ್ಯಾ ಅದ ಅಂತಾರ ಹಿಂದುಸ್ಥಾನ
ಸಾಹುಕಾರ, ಇಂದ್ರಾಜಿ ಭೂಮಿ ಹಂಚರಿ ಅಂದರೆ
ಅಕಿಗ್ಯಾಕೆ ಬ್ಯಾತಾರಾ ಭೂಮಿ ಹಂಚಿಕೆ ಅಗಲಿಕ್ಕೆ ಬೇಕೋ
ಕಾಯ್ದೆ ಮಾಡ್ಯಾನ ಕರಾರ, ಪ್ರಜುಪ್ರಭುತ್ವ, ಸಮಾನ, ಸಮೂತಾ
ಈ ಪಂಚ ಮಹಾಭೂತಾ ! [೯೪]

---

೯೩. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಅರ್ಜುನರಾವ ಮು.ಹಾರೋರಗೇರಿ ಬೀದರ,ದಿ:೨೦-೦೬-೦೯ ರಂದು ಬೇಟಿ.
೯೪. ಅದೇ

ಈ ಹಾಡಿನಲ್ಲಿ ಬಾಬಾ ಸಾಹೇಬರನ್ನು ಕುರಿತು ಕೋಟಿ ಕೋಟಿ ಮಾನವರನ್ನು ಪಾವನ ಮಾಡಿದವರು ಭೀಮ. ಎಲ್ಲರ ಹಣೆಬರ ಬರೆದ, ಬ್ರಹ್ಮನ ಹಣೆ ಬರಹ ಬರೆದವರು ಯಾರು? ಗೊತ್ತಿಲ್ಲ ಆದರೆ ಬಾಬಾ ಸಾಹೇಬರು ಭಾರತ ಜನಾಂಗದ ಹಣೆಬರಹ ಬರೆದರು. ಜೀವ ಹಿಂಸೆ ಮಾಡಿದವರು ದೇವರಾಗೊದಿಲ್ಲ ಎಂದು ಬೌದ್ಧಧರ್ಮದ ಅಹಿಂಸೆ ತತ್ವವನ್ನು ಹೇಳಲಾಗಿದೆ, ಸತ್ಯ ಮುಕ್ತಿ ಮಾರ್ಗ ತೋರಿದ ಭೀಮಾ, ಗಾಂಧಿ ಕುರಿತು ಅಂಬೇಡ್ಕರರ "ನಾನಾ ಗಾಂಧಿ ಮತ್ತು ಜೀನ್ನಾರವರನ್ನು ಟೀಕಿಸಿರಬಹುದು ಆದರೆ ಅವರನ್ನು ದ್ವೇಷಿಸುವುದಿಲ್ಲ ಏಕೆಂದರೆ ನನ್ನ ರಾಷ್ಟ್ರ ನನಗೆ ಅವರಿಗಿಂತ ಪರಮವಾದದ್ದು"[೯೫] ಎಂಬ ಹೇಳಿಕೆಯಲ್ಲಿ ಬಾಬಾ ಸಾಹೇಬರಿಗೆ ಗಾಂಧೀಜೀ ಹಾಗೂ ದೇಶದ ಬಗ್ಗೆ ಭಕ್ತಿ ಇತ್ತು ಎಂಬ ಅರಿವುವಾಗುತ್ತದೆ. ಹಾಗೂ ಸ್ವರಾಜ ರಕ್ಷಣಾ ಮಾಡಿದರು. ಪ್ರಜಾಪ್ರಭುತ್ವ ಸಮಾನತೆ ಎಂಬ ತತ್ವವನ್ನು ಒತ್ತಿ ಹೇಳಿದರು.

## ೪. ಅಂಬೇಡ್ಕರ ಆರತಿ ಹಾಡುಗಳು:

ಜಯವೆಂದು ಬೆಳಗುವೆ ಜಯಭೀಮದಾತ
ಜಯಭೀಮದಾತ ಬುದ್ಧ ಭಗವಂತ
ಜಯವೆಂದು ಬೆಳಗುವೆ ಜಯಭೀಮದಾತ ॥ ಪ ॥

ಮನವೇ ಕರ್ಪೂರ ಅಗರಬತ್ತಿ ಉರಿಯುತ್ತ
ಬುದ್ಧನ ಭಕ್ತ ಜಯ ಭೀಮದಾತ ॥ ಜಯವೆಂದು ॥

ಕಷ್ಟ ಪರಿಹಾರ ಮಾಡೊ ಬಡವರ ದಾತ
ಸಕಲರ ದುಃಖ ಹೋಗಿ ಸುಖ ಬರಲಿ ಶಾಂತ ॥ ಜಯವೆಂದು ॥

ಮಾತಾ ಪೀತರ ಬೆಳಗುವೆ ಜನ್ಮ ಕೊಟ್ಟಂತ
ಮಂಗಳ ಸೂತ್ರ ಕಟ್ಟಿದ ಪತಿದೇವರ ನಾದ ॥ ಜಯವೆಂದು ॥[೯೬]

ಈ ಆರತಿ ಹಾಡಿನಲ್ಲಿ ಜಯಭೀಮದಾತನನ್ನು ಆರತಿ ಮಾಡಿ ಬೆಳಗುವೆ ಮನವೇ ಕರ್ಪೂರದ ಹಾಗೆ ಪಾಪವನ್ನು ಉರಿಸುತ್ತಾ ಶುದ್ಧವಾಗಿ ಬೆಳಗುವೆ. ಬಡವರ ದಾತ ಬೀಮನೇ ಕಷ್ಟ ಪರಿಹಾರ ಮಾಡು, ಎಲ್ಲರ ದುಃಖ ಹೋಗಿ, ಸುಖ ಬರಲಿ ಜನ್ಮ ಕೊಟ್ಟಿದ ಮಾತಾ ಪಿತರ ಮಂಗಳ ಸೂತ್ರ ಕಟ್ಟಿದ ಪತಿದೇವರನ್ನು ಬೆಳಗುವೆ ಎಂದು ಮೇಲಿನ ಆರತಿ ಹಾಡಿನಲ್ಲಿ ಪ್ರಾರ್ಥಿಸಲಾಗಿದೆ.

ಜಯ ಭೀಮರಾಯ ಮಾಡುವೆ ಪೂಜಾ ॥
ಸದ್ಗುರು ನಾದ ದೀನ ಶಾಂತಾ
ಬುದ್ಧಕೊಡು ಅಂತ
ಬುದ್ಧ ಭಗವಂತ ॥ ಪ ॥

ಭೀಮದೇವ ಪುತ್ರ ಪರಮ ಪವಿತ್ರ
ಮಾಡುವೆ ಸ್ತೋತ್ರ ತೆರಿಯೋ ಜ್ಞಾನ ನೇತ್ರ ॥ ಜಯ ॥

ಹದಿನಾಲ್ಕು ವಿದ್ಯೆಕ ನೀ ನಾದೆ ದಯಕ
ಅದೇ ಬೌದ್ಧ ಧರ್ಮಕ್ಕೆ ಪುನಃ ತಂದೆ ಹಿಂದೆ ಬಂದಕ ॥ ಜಯ ॥

---

೯೫. ಡಾ.ಮ.ನ.ಜಯಶಯ್ಯ (ಅ) ಡಾ.ಅಂಬೇಡ್ಕರ ವಿರಚಿತ ಪು.೧೨೧, ಪ್ರ.ವ.೧೯೯೮

೯೬. ಕ್ಷೇತ್ರ ಕಾರ್ಯ ಸಂಗ್ರಹಾ ಜೈ ಭೀಮ ಸಂಘ, ಬೀದರ. ದಿ:೨೦-೦೮-೦೯

ವಿದ್ಯೆಗೆ ಸದ್ಗುರುರಾಯ, ಬುದ್ಧಿಗೆ ಜಯಭೀಮರಾಯ
ಬೌದ್ಧ ದೇವ ನಿಮ್ಮ ಮಾಯಾ, ಶುದ್ಧ ಮಾಡೊ ದಲಿತರ ಕಾಯ ॥ ಜಯ ॥[೯೭]

ಬುದ್ಧ ಭೀಮ ದೇವರಿಗೆ ಬುದ್ಧಿ ಕೊಡು ಅಂತ ಬೇಡುವೆ. ಜ್ಞಾನ ನೇತ್ರ ತೆರಿಸು ತಂದೆ, ಹದಿನಾಲ್ಕು ವಿದ್ಯೆಯಲ್ಲಿ ಕರಗತ ನಾದೇ ದೇವರೇ ನಮ್ಮನ್ನು ದಯಪಾಲಿಸು ನಿಮ್ಮ ಮಾಯಾ ಇಂದ ನಮ್ಮ ಕಾಯಾ ಶುದ್ಧ ಮಾಡೊ ಎಂದು ಆರತಿ ಹಾಡಿನ ಮೂಲಕ ಆರಾದಿಸಲಾಗಿದೆ.

ನೀಲ ಝುಂಡವ ತರಸಿ
ನಾವು ತಂಪಾವರಿಗೆ ಮೆರಸಿ

ಆರತಿ ಮಾಡಿರಿ ಬೇಗ ನಾವು
ಡಾ. ಅಂಬೇಡ್ಕರಗೆ ॥ ಪ ॥

ಬಾಳೆ ಹಣ್ಣಿವ ತರಿಸಿ ನಾವು
ಬಾಲೆ ವುಡಿಯ ತುಂಬಿ
ಆರತಿ ಮಾಡಿರಿ ನಾವು
ಡಾ. ಅಂಬೇಡ್ಕರಗ ।

ನೀಲ ಝುಂಡವ ತರಿಸಿ
ನೇರಳದಿಂದ ಮರಸಿ
ಆರತಿ ಮಾಡಿರಿ ಬೇಗ
ನಾವು ಡಾ. ಅಂಬೇಡ್ಕರಗ [೯೮]

ಈ ಮೇಲಿನ ಹಾಡಿನಲ್ಲಿ ಅಂಬೇಡ್ಕರ ಪೂಜೆ ಕುರಿತು–ನೀಲ ಛಂಡವ (ಧ್ವಜ) ತಂದು ಮೆರೆಯಿಸಿರಿ ಬಾಳೆ ಹಣ್ಣುಗಳಿಂದ ಬಾಲೆಯ ಉಡಿ ತುಂಬೋಣಾ ನೇರಳದಿಂದ ನೀಲ ಝುಂಡವ ಮೆರಿಸಿ, ನಾವು ಡಾ. ಅಂಬೇಡ್ಕರಗ ಬೇಗ ಆರತಿ ಮಾಡಿ ಪಾವನ ಆಗೋಣಾ.

ಆನಂದವೇ ಆನಂದವೇ
ಆನಂದ ಮನದಲ್ಲಿ ಹಾಡೆಂದವೇ ॥ ಪ ॥

ನೀಲ ಝುಂಡಾ ಕೈಯಲ್ಲಿ
ಬಾಬಾ ಭಜನೆ ಮನದಲ್ಲಿ
ಆನಂದವೇ ॥

ಪಟ್ಟಿಯಲ್ಲಿ ಆನಂದ
ತಬಲದಲ್ಲಿ ಆನಂದ
ಆನಂದವೇ ॥

ನಾಗಪುರ ಎಷ್ಟು ಚಂದ
ಬುದ್ಧ ಭೀಮ ನಮಗೆ ಚಂದ
ಆನಂದವೇ ॥ [೯೯]

---

೯೭. ಕ್ಷೇತ್ರ ಕಾರ್ಯ ಸಂಗ್ರಹಾ ಜೈ ಭೀಮ ಸಂಘ, ಬೀದರ. ದಿ:೨೦–೦೮–೦೯

೯೮. ಕ್ಷೇತ್ರಕಾರ್ಯದಲ್ಲಿ ಹಾಡಿದವರು ಲಕ್ಷ್ಮಿ ಬಾಯಿ ಮು.ಬರ್ಗಿಪುರ, ದಿ.೨೦–೦೭–೦೯ ರಂದು ಸಂದರ್ಶನ.

೯೯. ಅದೇ

ಭೀಮ ಬಾಬರ ಭಜನೆ ಮಾಡುವುದರಿಂದ ಮನಕ್ಕೆ ಎಲ್ಲಿಲ್ಲದ ಆನಂದ ದೊರೆಯುತ್ತದೆ. ಬಾಬಾ ಭಜನೆ ಮನದಲ್ಲಿ, ನೀಲ ಝುಂಡಾ ಕೈಯಲ್ಲಿ ಇದ್ದರೆ ಆನಂದವಾಗುತ್ತದೆ. ಪೇಟಿಯಲ್ಲಿ, ತಬಲದಲ್ಲಿ ಆನಂದ ಇದೆ. ನಾಗಪುರ ಚಂದ, ನಾವು ಎಲ್ಲರೂ ಹೋಗಿ ದೀಕ್ಷೆ ಪಡಿಯೋಣಾ, ಬುದ್ಧ ಭೀಮರ ಮಾರ್ಗ ಕಾಣೋನಾ ಎಂದು ಎಲ್ಲ ದಲಿತರಿಗೆ ಭಕ್ತಿ ಮೂಲಕ ಕರೆ ನೀಡಲಾಗಿದೆ.

ನಮೋಬುದ್ಧ ನಮೋ ಭೀಮ
ನಮೋ ನಮೋ ಭೀಮ ಆರತಿ

ಮನವು ಮೀಸಲಿರಿಸಿ ಬೆಳಗುವೆ
ಬುದ್ಧ ಭೀಮಗೆ ಆರತಿ ॥ ಪಲ್ಲ ॥

ತ್ರಿಸರಣ ಪಂಚಶೀಲ ಮಂತ್ರ
ಕೊಡುಗೆಯಾಗಿ ನಮಗೆ ಇತ್ತವಗೆ
ಮಧುಮ ಮಾರ್ಗದ ಮಹಿಮೆ ತೋರಿದ ॥
ಮಹಾತ್ಮ ಗೌತಮ ಬುದ್ಧನಿಗೆ ॥ ನಮೋ ಬುದ್ಧ ॥

ಬೌದ್ಧ ಧರ್ಮವೇ ಶ್ರೇಷ್ಠವೆಂದು
ನಿಜ ತತ್ವಕೆ ಶರಣಾದವಗೆ
ಸರ್ವಧರ್ಮಗಳು ಶೋಧಮಾಡಿ ॥
ನಿಜಾಂಶವನು ತಿಳಿದವಗೆ ॥ ನಮೋ ಬುದ್ಧ ॥

ಭೀಮಬಾಯಿ ರಾಮಜಿಯ ಸಂತಾನ
ವಂಶದ ಕುಡಿವರ ಪುತ್ರನಿಗೆ
ತನ್ನ ಸರ್ವಸ್ವವೇ ತ್ಯಾಗಮಾಡಿ ॥
ಬಡವರಿಗೆ ಬೆಳಕಾದವಗೆ ॥ ನಮೋ ಬುದ್ಧ ॥

ಇಡೀ ಜೀವನ ಕಷ್ಟದ ಕಹಿಉಂಡು
ಕಣ್ಣಿರೊಳು ಕೈತೊಳೆದವಗೆ
ನಮಗಾಗಿ ತಾ ಮುಡುಪಾಗುಳಿದ ॥
ಕರುಣಾಮಯಿ ಮಹಾದೇವನಿಗೆ ॥ ನಮೋ ಬುದ್ಧ ॥

ದೊಡ್ಡ ಹಳ್ಳಿಖೇಡ ಭೀಮಭಕ್ತರ ಮನದಿ
ಮನೆ ಮಾಡಿವರು ಆದವಗಿ
ದಾಸ ಮೌನರ ಶಿಶುವಿನೋಳು ಬೆರೆತ ॥
ಸದಾಹಂಬಲ ಭೀಮ ಸೇವೆಯೊಳಗೆ ॥ ನಮೋ ಬುದ್ಧ ॥ [೧೦೦]

ಪ್ರಸ್ತುತ ಹಾಡಿನಲ್ಲಿ ಭೀಮ ಬುದ್ಧರ ಭಕ್ತಿ ಕುರಿತು ತನು, ಮನ, ಧನ ಎಲ್ಲವೂ ನಿಮಗೆ ಅರ್ಪಿಸಿ ಆರತಿ ಬೆಳಗುವೆ, ಬುದ್ಧ-ಭೀಮ ದೇವರ ತತ್ವ ನಮಗೆ ಕೊಡುಗೆಯಾಗಿ ನೀಡಿದರು. ತನ್ನ ಸರ್ವಸ್ವ ತ್ಯಾಗಮಾಡಿ ಬಡವರಿಗೆ ಬೆಳಕಾಗಿ ಬಂದು ನಿಮ್ಮನ್ನು ಬೆಳಗುವೇವು ಎಂದು ಭಕ್ತಿ ವ್ಯಕ್ತವಾಗಿದೆ.

---

೧೦೦. ಕ್ಷೇತ್ರಕಾರ್ಯದಲ್ಲಿ ಹಾಡಿದವರು ಲಕ್ಷ್ಮಿ ಬಾಯಿ ಮು.ಬರ್ಗಿಪುರ, ದಿ.೨೦-೦೭-೦೯ ರಂದು ಸಂದರ್ಶನ.

ಆರುತಿ ಬೀಮರಿಗೆ ಬೆಳಗುವೆ ಮಂಗಳ ಜ್ಯೋತ ನಿಮಗೆ
ಜಯ ಜಯ ಭೀಮಗೆ ಅಂಬೇಡ್ಕರರಿಗೆ
ಬಡ ಬಗ್ಗರ ದಾತರಿಗೆ ಜಯ ಭೀಮ ಬಾಬರಿಗೆ ॥ ಆರತಿ ॥
ಸಕಲರ ದುಃಖದೂರ ಮಾಡಿದರೊ ಬುದ್ಧ ಭೀಮ ದೇವರ ॥
ಸಕಲರ ಸರ್ವ ದುಃಖದೂರ ಮಾಡಿ ಮುಕ್ತಾಯಮಾಗಿದರ
ಜಯ ಭೀಮ ಬಾಬರ ॥ ಆರುತಿ ಭೀಮರಿಗೆ ॥

ತಂದೆ ನಿನಗ ಯಾತರದಿ ಬೆಳಗುವೆ ಪುಷ್ಪವು ಮುಂಬತ್ತಿ ॥
ಬೆಳ್ಳಿ ತಾಟ ಬಂಗಾರ ಕಳಸವು ತರತಿ ಬುದ್ಧ–ಭೀಮರ ಜಯಂತಿ
ಕಳಸ ಕಮಲ ನಯಗಳ ಶಾಂತಿ ॥ ಆರುತಿ ಭೀಮರಿಗೆ ॥

ಅಭಿಷೇಕ ಮಾಡಿ ಜ್ಯೋತಿ ಬೆಳಗುವೆ ಬೋಧಿಯ ಆಕ್ಷಂತಿ ॥
ಪಂಚಶೀಲ ಬಾಬರ ಪಂಚ ಆರುತಿ ಕರ್ಪೂರದ ಮುಂಬತ್ತಿ
ಗುರುಗಳ ಭಿಕ್ಷು ಭದಂತರ ಮೂರ್ತಿ ॥ ಆರುತಿ ಭೀಮರಿಗೆ ॥

ಚಿಲ್ಲರ್ಗಿ ಊರ ದೇವ ಭಗವಾನ ಭೀಮ ನಗರವ ॥
ಬಾಬರ ಭಜನಿಗೆ ಬುದ್ಧರವರ ಭಗವನ ಬುದ್ಧದೇವ
ಬಾಬರಿಗೆ ಪಂಚ ಆರುತಿ ಬೆಳಗುವ ॥ ಆರತಿ ಭೀಮರಿಗೆ ॥[೧೦೧]

ಈ ಹಾಡಿನಲ್ಲಿ ಬುದ್ಧ–ಭೀಮ ದೇವರನ್ನು ಯಾವ ರೀತಿ ಪೂಜೆ ಮಾಡಲಿ, ಪುಷ್ಪ, ಮುಂಬತ್ತಿ ತಂದು, ಬೆಳ್ಳಿ ತಾಟು ಬಂಗಾರ ಕಳಸವನ್ನು ತಂದು ಪೂಜೆ ಮಾಡಲೇ ? ಪಂಚಶೀಲ ಬಾಬರ ಪಂಚ ಆರತಿ ತಂದು ಬೆಳಗುವೆ, ಎಂದು ಮೇಲಿನ ಹಾಡಿನ ಮೂಲಕ ಭಕ್ತಿ ವ್ಯಕ್ತ ಪಡಿಸಲಾಗಿದೆ.

**೫. ಜನಪದ ಮಟ್ಟಗಳು :**

ಮಟ್ಟುಗಳು ಜನಪದ ಹಾಡುಗಳಿಗೆ ವಿಶೇಷವಾದ ಶೋಭೆಯನ್ನು ತರುತ್ತವೆ. ಭಜನೆ ತತ್ವ ಪದಗಳನ್ನು ಹಾಡುವಾಗ ನಿರಸವುಂಟಾಗದಂತೆ ಮಟ್ಟುಗಳು ಗಮನವಹಿಸುತ್ತವೆ. ಜನಪದ ಅಂಬೇಡ್ಕರ ಹಾಡುಗಳಲ್ಲಿ ಬುಲಾಯಿ ಹಾಡುಗಳನ್ನು ಕಾಣಬಹುದು.

ಜಾನಪದ ಹಾಡುಗಳ ಪ್ರಕಾರಗಳಲ್ಲೊಂದಾದ ಬುಲಾಯಿ ಹಾಡುಗಳು ಜಾನಪದ ಸಾಹಿತ್ಯದ ಸೊಗಸು ಆಗಿವೆ. ಜಾನಪದರು ಹಳ್ಳಿಗಳಲ್ಲಿ ಹಬ್ಬದ ಸಂದರ್ಭದಲ್ಲಿ ಬುಲಾಯಿ ಹಾಡುಗಳನ್ನು ಹಾಡುತ್ತಾರೆ.

**ಬುಲಾಯಿ ಹಾಡುಗಳಲ್ಲಿ ಬಾಬಾ ಸಾಹೇಬರು :**

ಬುಲಾಯಿ ಹಾಡುಗಳಲ್ಲಿ ಬಾಬಾ ಸಾಹೇಬರ ಬದುಕನ್ನು ಮೇಲುಕಿ ಹಾಕಿ ನೋಡಬಹುದು.

ಆದಿ ಅನಾದ ಮಾನವ ಕಾಲ
ಕಷ್ಟವಾಯಿತು ಭಾರತಕ್ಕೆಲ್ಲ
ಭಾರತೀಯ ದಲಿತಕ್ಕೆಲ್ಲ ॥ ಕೋಲೆನ್ನ ಕೋಲೆ ॥

೧೦೧. ಕೆ.ಎಸ್. ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು ಪು.೪೨

ಭೀಮ ಬಾಯಿ ಮಾತ ನೀಲ
ರಾಮಜೀ ತಂದೆಯ ಮ್ಯಾಲ
ಭೀಮರ ತಂದೆ ತಾಯಿರೆಲ್ಲ ॥ ಕೋಲೆನ್ನ ಕೋಲೆ ॥
ಐದು ವರ್ಷ ಭೀಮ ಬಾಲ
ಪ್ರಾಥಮಿಕ ಶಾಲೆ ಸೆರೆರಲ್ಲ
ಪೈಲಿ ಪುಸ್ತಕ ಹಿಡಿದಿದರಲ್ಲ ॥ ಕೋಲೆನ್ನ ಕೋಲೆ ॥
ಹಿಂದೂ ಬ್ರಾಹ್ಮಣ ಹುಡುಗರಲ್ಲಿ
ಬುತ್ತಿ ರೊಟ್ಟಿ ತಂದಿದರಲ್ಲ
ಕಿಡಕಿಯಲ್ಲಿ ಇಟ್ಟದರಲ್ಲಿ ॥ ಕೋಲೆನ್ನ ಕೋಲೆ ॥
ಹೊರಟಂತಹ ಭೀಮ ಬಾಲ
ಕಿಟಕಿ ಕಡೆಯಿಂದ ನಡೆದರಲ್ಲಿ
ಮುಟ್ಟಿ ಎಂದು ಚಿರ್‍ಯಾರೆಲ್ಲ ॥ ಕೋಲೆನ್ನ ಕೋಲೆ ॥ [೧೦೨]

ಪ್ರಸುತ್ತ ಹಾಡಿನಲ್ಲಿ ಬಾಬಾ ಸಾಹೇಬರು ಬಾಲ್ಯ ಜೀವನದಲ್ಲಿ ಅನುಭವಿಸಿದ ನೋವಿನ ಚಿತ್ರಣವಿದೆ. ಐದು ವರ್ಷದವರಾದರೂ ಸಹ ಪ್ರಾಥಮಿಕ ಶಾಲೆ ಸೇರಿರುವುದಿಲ್ಲ, ಆದರೂ ವಿದ್ಯ ಅರಗಿಸಿಕೊಂಡು ಜ್ಞಾನಿ ಯಾದರು ತರಗತಿಯಲ್ಲಿ ಹಿಂದೂ, ಬ್ರಾಹ್ಮಣ ಹುಡುಗರು ಊಟದ ರೊಟ್ಟಿ ಬುತ್ತಿ ಭೀಮರಿಗೆ ಸ್ಪರ್ಶಿಸಬಾರದು ಕಿಟಕಿಯಲ್ಲಿ ಇಡುವರು. ಬಾಬಾ ಸಾಹೇಬರು ಆ ಹುಡಗರ ಹತ್ತಿರದಿಂದ ನಡೆದು ಹೊದರೆ ಮುಟ್ಟಿ ಎಂದ ಕೂಗುತ್ತಿದ್ದರು. ಅಂದರೆ ಮುಟ್ಟಿಸಿಕೊಳ್ಳಬಾರದು, ಅಸ್ಪೃಶ್ಯರೆಂದು ಅವಮಾನಕ್ಕೆ ಒಳಗಾದರು.

ಭಾರತ ಭೂ ಒಡೆಯರ
ಜಯ ಭೀಮ ದೇವರ
ಬಡವ ಬಗ್ಗರ ಭಕ್ತರ ರನ್ನದೆ ॥ ಕೋಲು ಕೋಲೆ ॥

ಹಳ್ಳ ಕೆರೆಯ ಬಾವಿಯ ನೀರ
ಮುಟ್ಟಿಲಿಲ್ಲ ಈ ಬಡವರ
ನಾಯಿಕ್ಕಿಂತೆ ಕೀಳಾಗಿ ನೋಡ್ಯಾರ ॥ ರನ್ನದೆ ॥ ಕೋಲು

ಬಡವ ಕುಟುಂಬದಲ್ಲಿ ಹುಟ್ಟ
ಬಾಳನ್ನೇ ಮುಡಪಾಗಿಟ್ಟ
ಕ್ಷುದ್ರ ಹಿಂದೂ ಧರ್ಮ ನೀ ಬಿಟ್ಟ ॥ ರನ್ನದೆ ॥ ಕೋಲು

ಚೆಲ್ಲರ್ಗಿ ಊರು ಹುಟ್ಟಿ
ಭೀಮ ನಗರ ಗಟ್ಟಿ
ಮಾಣಿಕರ ಮಾತು ಕೇಳಿರಿ ಮನಮುಟ್ಟಿ ॥ ರನ್ನದೆ ॥ ಕೋಲು [೧೦೩]

ಈ ಬುಲಾಯಿ ಹಾಡಿನಲ್ಲಿ ಅಸ್ಪೃಶ್ಯತೆ ಬಗ್ಗೆ ಹಳ್ಳಿ ಕೆರೆಯ ಬಾವಿಯ ನೀರ ಕುಡಿಯಲು ಬಿಡುತ್ತಿರಲಿಲ್ಲ ದಲಿತರನ್ನು ಪ್ರಾಣಿಗಿಂತ ಕೀಳಾಗಿ ಕಾಣುತ್ತಿದ್ದರು ಎಂದು ಹೇಳಲಾಗಿದೆ. ಭಾರತ ಬಡ ಜನರು ಕಾಲಾನು ಕಾಲದಿಂದ ಸರ್ವರ ಆಳು ಆಗಿ ದುಡಿದರು. ಬಾಬಾ ಸಾಹೇಬರು ಬಡವ ಕುಟುಂಬದಲ್ಲಿ ಹುಟ್ಟಿ, ನಮಗಾಗಿ ಅವರ ಬಾಳನ್ನೇ ಮುಡಪಾಗಿ ಇಟ್ಟರು, ಹಿಂದೂ ಧರ್ಮದಲ್ಲಿ ಕಳಂಕ ಪ್ರಾಯವಾದ ಅಸ್ಪೃಶ್ಯತೆ ಕಂಡು ಆ ಧರ್ಮವನ್ನು ತ್ಯಜಿಸಿದರು.

"ಸಂವಿಧಾನದಲ್ಲಿ ಹೆಣ್ಣು ಮಕ್ಕಳಿಗೆ ಆಸ್ತಿಯ ಪ್ರಾಪ್ತವಾಗುವುದು" [೧೦೪]

---

೧೦೨. ಕೆ.ಎಸ್. ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು ಪು.೩೫

೧೦೩. ಅದೇ

೧೦೪. ಡಾ. ಬಾಬಾ ಸಾಹೇಬ ಅಂಬೇಡ್ಕರ ಬರಹಗಳು ಮತ್ತು ಭಾಷಣಗಳು ಸಂಪುಟ–೧೪,ಪು.೧೯೩, ಪ್ರ.ವ.೨೦೦೧

ಮನುವಿನ ಕಾಯ್ದ ಒಪ್ಪದೆ, ಸರಿಸಮ ಹಕ್ಕುಗಳನ್ನು ನೀಡಿದವರು ಬಾಬಾ ಸಾಹೇಬರು, ಅವರು ಬುದ್ಧ ಧರ್ಮದ ಬೋಧಿ ವೃಕ್ಷದ ಗಿಡ ನೆಟ್ಟಿದರು. ಜನರ ಕಲ್ಯಾಣಕ್ಕಾಗಿ ಪಣತೊಟ್ಟರು ಶಿಕ್ಷಣ ಪಡೆಯಲು ಸೌಲಭ್ಯಕ್ಕಾಗಿ ಹಾಸ್ಟೆಲ್ ಬೋರ್ಡಿಂಗ ವ್ಯವಸ್ಥೆ ಮಾಡಿಪರು ಎಂದು ಅವರ ಸಾಧನೆಯನ್ನು ವಿವರಿಸಲಾಗಿದೆ.

## ➢ ಬುಲಾಯಿ ಹಾಡುಗಳ ವೈಶಿಷ್ಟ್ಯ :

"ನಾರಿಯರ ನಾಗರ ಪಂಚಮಿ ಹಬ್ಬದ ಸಂದರ್ಭದಲ್ಲಿ ಹಾಡುವ ಹಾಡುಗಳೇ ಬುಲಾಯಿ ಹಾಡುಗಳು ಬುಲಾಯಿ ಅನ್ನುವ ಪದ ಉರ್ದುವಿನ ಬಹಲಾವ ಶಬ್ದದಿಂದ ಬಂದರಬೇಕೆಂದು ತೋರುತ್ತದೆ. ಬಹಲಾವ್ ಎಂದರೆ ಮನರಂಜನೆ ಎಂದರ್ಥ ಮನರಂಜನೆಯೊಂದಿಗೆ, ರಜಾಕಾರರ ಹಾವಳಿ. ಪೌರಾಣಿಕ ಹಾಗೂ ಐತಿಹಾಸಿಕ ಕಥಗಳ ಬುಲಾಯಿ ಹಾಡುಗಳಿವೆ. ಬುಲಾಯಿ ಹಾಡುಗಳು ಬೀದರ ಜಿಲ್ಲೆಗೆ ಮಾತ್ರ ಸೀಮಿತವಾಗಿವೆ.

ಬುಲಾಯಿ ಹಾಡುಗಳಲ್ಲಿ ಬಳಕೆಯಾಗುವ ರಜಾಕರ ಎಂಬ ಪದ ಅರ್ಥ ಸ್ವಯಂ ಸೇವಕ ಎಂದರ್ಥ ೧೯೪೮ರ ಮುಸ್ಲಿಂ (ರಜಾಕಾರ)ರು ಮಾಡಿದ ದಾಂಧಲೆ ಕುರಿತಾದ ಬುಲಾಯಿ ಹಾಡುಗಳು ಕೇವಲ ಬೀದರ ಜಿಲ್ಲೆಯಲ್ಲಿ ಮಾತ್ರ ದೊರಕುತ್ತವೆ. ಬುಲಾಯಿ ಹಾಡಿನ ಪ್ರತಿ ನುಡಿಯ ಕೊನೆಗೆ 'ಕೋಲೆಣ್ಣ ಕೋಲೆ" ಎನ್ನುವರು. ಆದರೂ ಯಾರೂ ಕೋಲು ಹಾಕದೆ ಇರುವುದು, ಇವುಗಳ ವಿಶೇಷತೆ ಈ ಹಾಡುಗಳಲ್ಲಿ ಸತ್ಯ, ಧೈರ್ಯ,ಸಹನೆ, ಶೋಷಣೆ ಪ್ರತಿನಿಧಿಸುತ್ತವೆ. ಬುಲಾಯಿ ಪದಗಳು ಇತಿಹಾಸ ಹಾಗೂ ಪುರಾಣಗಳಲ್ಲಿ ಕಾಣಿಸಿಕೊಳ್ಳುವ ಮಹಾಪುರಷರ ಕುರಿತಾಗಿವೆ". [೧೦೫]

**ಧಾಟಿ :**

ಸಂಭಾಷಣಾ ರೂಪದ ಸರಪಳಿಯಂತಿರುವ ಈ ಹಾಡುಗಳು ತುಂಬಾ ಸ್ವಾರಸ್ಯಕರವಾಗಿವೆ. ಹಾಡುವವರ ಗಲೆಗೆ ತಕ್ಕಂತೆ ಹಾಡಿನ ಧಾಟಿ ಇರುತ್ತದೆ. ಹಿಗ್ಗಿನ ಕುಗ್ಗಿಸಿ, ಹಾಡನ್ನು ಹೇಳುತ್ತಾರೆ. ಜೋಕು ಹಾಕುತ್ತಾರೆ.

ದ್ವಿಪದಿ ಹಾಗೂ ತ್ರಿಪದಿ:

ಬುಲಾಯಿ ಹಾಡುಗಳು ದ್ವಿಪದಿ ಅಥವಾ ತ್ರಿಪದಿಯಲ್ಲಿರುತ್ತವೆ.

ತ್ರಿಪದಿಗೆ ಉದಾಹರಣೆ:

ಮನುವಿನ ಕಾಯ್ದೆ ಸುಟ್ಟಿ
ಸರಿಸಮ ಮಾಡಿಟ್ಟಿ
ಬೋಧಿ ವೃಕ್ಷದ ಗೀಡ ನೇಟ್ಟಿ ॥ ರನ್ನದೆ ॥ ಕೋಲು [೧೦೬]

ಹೆಣ್ಣು ಮಕ್ಕಳಿಗೆ ಹಕ್ಕಿಲ್ಲ ಎಂಬ ಮನುಕಾಯ್ದೆಯನ್ನು ಬಾಬಾ ಸಾಹೇಬರು ಸುಟ್ಟು ಹಾಕಿ ಸರಿಸಮಾನತೆ ನೀಡಿದರು. ಬೋಧಿ ವೃಕ್ಷ ನೀಡಿ ನೇಡುವುದೆಂದರೆ ಬೌದ್ಧ ಧರ್ಮ ಮಹತ್ವ ತಿಳಿಸಿ ಹೇಳುವುದಾಗಿದೆ.

---

೧೦೫. ಡಾ.ಹೆಬ್ಬಾಳೆ ಜಗನ್ನಾಥ (ಲೇ) ಬೀದರ ಜಿಲ್ಲೆಯ ಬುಲಾಯಿ ಹಾಡುಗಳು ಪು. ಪ್ರಸ್ತಾವನೆಯಿಂದ ಪ್ರ.೧೯೯೬
೧೦೬. ಕೆ.ಎಸ್. ಮಾಣಿಕರಾವ ಗವಾಯಿ (ಲೇ) ಭೀಮ ಲೀಲಾ ಕವಿತೆಗಳು ಪು.೩೨

# ಅಧ್ಯಾಯ – ೪

## ಹಾಡುಗಳಲ್ಲಿ ಸಾಹಿತ್ಯದ ಸೊಗಸು

### ೧) ದೇಶಿ ನುಡಿಗಟ್ಟು :

ನುಡಿಗಟ್ಟುಗಳು ಸಾಮಾನ್ಯವಾಗಿ ಭಾಷೆಗೆ ಮೆರಗು ನೀಡುತ್ತವೆ. ಹಾಡಿನ ಭಾಷೆಗೆ ಸಹಜ ಶೋಭೆ ನೀಡಿ ಹೊಸತನವ ಮೂಡಿಸುತ್ತದೆ. ಇವು ಭಾಷೆಯ ಜೀವಂತ ಸ್ಪಂದನದ ಪ್ರತೀಕವಾಗಿ ಭಾಷೆಗೆ ಶಕ್ತಿಯನ್ನು, ಬೆಳಕುಗಳನ್ನು ಹಿತ ಮಿತತ್ವವನ್ನು ತಂದುಕೊಡುವ ಉಪಕರಣಗಳು ಭಾಷೆಯ ಸಹಜತೆಗೆ ಸಲೀಲತ್ವಕ್ಕೆ ಕಾರತಣವಾಗುವ ತುಣುಕುಗಳಾಗಿವೆ.

ದೇಶಿ ಎಂಬ ಪದವು ಒಂದು ಪ್ರದೇಶದ ಬಾಷೆ, ಸಾಹಿತ್ಯ, ಸಂಸ್ಕೃತಿಯ ಅನನ್ಯತೆಯನ್ನು ಎತ್ತಿತೋರಿಸುತ್ತದೆ. ನಮ್ಮ ಪ್ರದೇಶದ ಮಣ್ಣಿನ ಸತ್ವ ಸೊಗಸನ್ನು ದೇಶಿ ಹೊಂದಿರುತ್ತದೆ. ದೇಶಿ ಮತ್ತು ನುಡಿಗಟ್ಟು ಎರಡು ಪದಗಳು ಸೇರಿ ಇದರ ಅರ್ಥ ಆಡು ಮಾತಿನ ಭಾಷಾ ಶಕ್ತಿಗಳು ಎಂದು ಹೇಳಬಹುದು.

**ಬಾಬಾ ಸಾಹೇಬರ ಜನಪದ ಹಾಡುಗಳಲ್ಲಿ ನುಡಿಗಟ್ಟು**

೧) "ಮಹಾನುಭವ ದರ್ಶನ ಸಿರಿಯೇ" [೧]

ಇದು 'ಭೀಮ ದೇವರೆ' ನಮ್ಮ ವಂದನೇ ಎಂಬ ಹಾಡಿನಲ್ಲಿದೆ. ಭೀಮ ದೇವರು ಮಹಾನುಭವ ದರ್ಶನದ ಸಿರಿಯೇ ಆಗಿದ್ದಾರೆ ಎಂದು ಅವರ ಆದ್ಯಾತ್ಮಕತೆ ಚಿತ್ರಿಸಲಾಗಿದೆ.

೨) "ಪ್ರಜ್ವಲಿಸೋ ಬೆಳಕು ಬರಿ
ತಾರೆಗಳಂತೆ ಮಿಂಚೊಂದ" [೨]

ಈ ನುಡಿ ಹಾಡೊಂದು ನಾ ಹಾಡುವೆನು ಎಂಬ ಹಾಡಿನಿಂದ ಆರಿಸಲಾಗಿದೆ. ನಮಗಾಗಿ ಬಂದ ಭೀಮದೇವರು ಪ್ರಜ್ವಲಿಸುವ ಬೆಳಕು ಹರಡಿಸಿದ್ದಾರೆ. ಅವರು ಕತ್ತಲಿಸಿ ಮಿಂಚು ಆಗಿದ್ದಾರೆ.

೩) "ಬೋಲೋ ಭೀಮ ಭಗವಾನ ಕೀ ಜೈ
ಬೋಲೋ ಬುದ್ಧ ಭಗವಾನ ಕೀ ಜೈ" [೩]

ಈ ನುಡಿ ಹಿಂದಿ ಭಾಷೆಯದಾಗಿದೆ. ಕೆಲವು ಬಾಬಾ ಸಾಹೇಬರ ಹಾಡುಗಳ ಕೊನೆಯಲ್ಲಿ ಈ ನುಡಿ ಬಳಸುವ ಪ್ರತೀತಿ ಇದೆ.

'ನುಡಿಗಟ್ಟುಗಳು', 'ದಾಸ ಮೌನರ ಶಿಶು', 'ಮಾಣಿಕರ ನುಡಿ', 'ಶರಣು ಶರಣೆನ್ನಿರಿ'

---

೧. ಕ್ಷೇತ್ರ ಕಾರ್ಯದಲ್ಲಿ ವಕ್ತಾರರು ಆರತಿ ಬಾಯಿ ಮು.ಮಂಠಾಳ ದಿ:೧೫-೦೭-೦೯

೨. ಅದೇ

೩. ಅದೇ

## ೨. ಭಾಷಾ ಬಾಂಧವ್ಯ :

ಯಾವುದೇ ಒಂದು ಭಾಷೆಯು ಸ್ವತಂತ್ರ್ಯ ಅಸ್ತಿತ್ವ ಹೊಂದಿರುವುದಿಲ್ಲ. ಅದು ಇತರ ಭಾಷೆಗಳ ಪ್ರಭಾವಕ್ಕೆ ಒಳಗಾಗುತ್ತದೆ. ಭಾಷೆಗಳ ಸಹಚಾರ್ಯ ಹೊಂದಿ ಗೀತೆಗಳು ಇತರ ಭಾಷೆಗಳ ಪ್ರಭಾವಕ್ಕೆ ಒಳಗಾಗುತ್ತವೆ. ಭಾಷೆ ಶ್ರೀಮಂತ ಗೊಳಿಸಲು ಬೇರೆ ಭಾಷೆ ಪದಗಳು, ಪ್ರಭಾವ ಬೇರಿ ಭಾಷೆಯಲ್ಲಿ ಪ್ರವೇಶ ಪಡೆದುಕೊಳ್ಳುತ್ತವೆ.

**ಮರಾಠಿ ಹಾಡುಗಳಲ್ಲಿ ಬಾಬಾ ಸಾಹೇಬ ಅಂಬೇಡ್ಕರ :**

ನಾನು ಕ್ಷೇತ್ರಕಾರ್ಯಕ್ಕಾಗಿ ನನ್ನ ಹುಟ್ಟೂರ ಆದ ಬೀದರ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಇಂಚೂರ ಗ್ರಾಮಕ್ಕೆ ಭೇಟಿ ನೀಡಿದೆ. ನನ್ನ ಸ್ವಂತ ಊರಿನಲ್ಲಿ ಕ್ಷೇತ್ರಕಾರ್ಯ ಮಾಡುವುದರಿಂದ ನನಗೆ ಮನಸ್ಸಿನಲ್ಲಿ ಒಂದು ರೀತಿಯ ಸಂತೋಷದ ಅನುಭವವಾಯಿತು. ಮಹಾರಾಷ್ಟ್ರದ ಗಡಿಭಾಗ ಇದ್ದ ಕಾರಣ ಇಲ್ಲಿ ಮರಾಠಿ ಭಾಷೆಯನ್ನು ಆಡುವ ಜನ ಸಂಖ್ಯೆ ಅಧಿಕವಾಗಿದೆ. ನಾವು ಮೊದಲು ಮರಾಠಿ ಅಂಬೇಡ್ಕರ ತೊಟ್ಟಿಲು ಹಾಡುಗಳನ್ನು ಸಂಗ್ರಹಿಸಲು ಪ್ರಾರಂಭಿಸಿದೆನು.

“ಮಾಜಗ ಭೀಮ ಬಾಬಾಚ ಹಲವಿತೆ
ಪಾಳನಾ ॥
ಜಾವುನ ಪಾಹಗ ಆಯಾಬಾಯಾ ಜೋಪಲೆ
ಕಾ ಭೀಮರಾಯ ಲಗಾ ಅಪಲ್ಯಾ
ಕಾಮಾಲಾ ಹಲವಿತೆ ಪಾಳನಾ ॥ [೪]

ಪ್ರಸ್ತುತ ಮೇಲಿನ ಹಾಡಿನಲ್ಲಿ ನನ್ನ ಭೀಮಬಾಬರ ತೊಟ್ಟಿಲು ನೂಕುತ್ತೇನೆ. ತೊಟ್ಟಿಲಿನಲ್ಲಿ ಪೃಥ್ವಿಯ ಸಮಾನವಾಗಿ ಮಲಗಿದ್ದಾರೆಯೆ? ನೋಡಿ ಇಲ್ಲವಾದಲ್ಲಿ ಅವರು ತಮ್ಮ ಅಮೂಲ್ಯ ಕೆಲಸದಲ್ಲಿ ತೊಡಗಿರುತ್ತಾರೆ. ಇಲ್ಲಿ ಭೀಮಬಾಬರ ತೊಟ್ಟಿಲನ್ನು ಸ್ವರ್ಗದಲ್ಲಿ ಕಟ್ಟಬೇಕು ಎಂಬ ಆಸೆಯು ಅಭಿಮಾನದಿಂದ ಮೂಡಿಬಂದಿದೆ.

ಬರಲಾ ಜಯ ಭೀಮ ಮಾಜಾ ಮನಾತಗ
ಕೀತಿ ಸಾಂಗು ಮಿ ಆತಾ ಜಗಾತಗ ”

ಇಲ್ಲಿ ನನ್ನ ಮನದ ತುಂಬಾ ಜಯ ಭೀಮರು ಇದ್ದಾರ, ಜಗಕ್ಕೆ ಯಾವ ರೀತಿ ನಿಮ್ಮ ವರ್ಣಿಸಲಿ ಎಂಬ ಭಾವ ಮೂಡಿದೆ.

ಹೇ ಖರಚ ಆಹೆ ಖರ ॥ ೨ ॥
ಕೇ ಭೀಮರಾವ ರಾಮಜೀ ಅಂಬೇಡ್ಕರ
ಬಾಬಾ ಸಾಹೇಬ ಅಂಬೇಡ್ಕರ
ನಾವ ಹೇ ಗಾಜಲೀಯ ಹೋ ಭಗಭರ ॥ ಹೇಖರಚ ॥ [೬]
ಇಲ್ಲಿ ರಮಾಬಾಯಿ ನೋವುನ್ನು ಕುರಿತು ಬರೆಯಲಾಗಿದೆ.

---

೪. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಭಾಗು ಬಾಯಿ ಮು.ಇಂಚುರ ಬೀದರ, ದಿ:೨೫-೦೭-೦೯

೫. ಅದೇ

೬. ಅದೇ

ಮನೆಯಲ್ಲಿನ ನಿಯಮದಿಂದ ನಡೆದುಕೊಳ್ಳುವ ಗುಣ ಇತ್ತು ತವರು ಮನೆಗೆ ಹೋಗದೆ, ಸಂಸಾರದ ಕಷ್ಟಗಳನ್ನು ಧೈರ್ಯದಿಂದ ಎದುರಿಸಿದರು. ದೀನ ದಲಿತರ ಉದ್ಧಾರಕ್ಕಾಗಿ ರಮಾಬಾಯಿ ಉಪವಾಸ ಉಳಿದರು, ಒಂಭತ್ತು ಕೋಟಿ ಜನರ ಮಹಾತಾಯಿ ಆಗಿದ್ದಾರೆ. ಬಂಗಾರ ಒಡವೆಯ ಆಸೆ ಇರಲಿಲ್ಲ, ಅವರು ಸದಾ ಭೀಮ ಬಾಬಾರ ಸನ್ಮಾನ ಮಾಡುತ್ತಿದ್ದರು.

ಕಾಯ್ದಾ ಭೀಮಾಚಾ
ಘೋಟೋ ಗಾಂಧಿಚಾ [೭]

ಈ ನುಡಿಯಲ್ಲಿ ಕಾಯ್ದೆಯನ್ನು ಭೀಮಾ ಬರೆದರು, ಆದರೆ ಘೋಟು ಗಾಂಧಿಜೀಯವರ ಹಚ್ಚಲಾಗಿದೆ, ಬಾಬಾ ಸಹೇಬರು ನೋಟಿನ ಘೋಟೊಗಿಂತ ಅವರು ನೀಲಿ ಕೋರ್ಟು ಮತ್ತು ಟೈನಲ್ಲಿ ಸುಂದರವಾಗಿ ಶೋಭಿಸುತ್ತಾರೆ ಎಂದು ಅವರ ಸುಂದರ ವ್ಯಕ್ತಿತ್ವ ವರ್ಣಿಸಲಾಗಿದೆ.

ಛಾತಿ ಠೊಕೊನಿ ಸಾಂಗು ಜಗಾಲಾ ಅಸಾ
ವಿಧವಾನ ಹೋನಾರ ನಾಹಿ [೮]

ಎದೆ ತಟ್ಟಿ ನಾನು ಜಗತ್ತಿಗೆ ಹೇಳುತ್ತೇನೆ. ಭಗವಾನ ಬುದ್ಧರಂತಹ ವಿದ್ಯಾವಂತ ಜ್ಞಾನಿ ಯಾರು ಇಲ್ಲ ಇದ್ದರೂ ಸಹ ಬುದ್ಧರ ಹಾಗೆ ಇರುವುದಿಲ್ಲ.

ಛಾಲಲಚಿ ರಮಾತು
ಮಲಾ ಸೊಡುನೀ
ಜನ್ಮ ಚೀ ಜೋಡಿ ಆಪಲಿ
ಕಾ ತೋಡುನಿ ॥ ಪ ॥ [೯]

ಇಲ್ಲಿ ರಮಾಬಾಯಿ ತೀರಿಕೊಂಡಾಗ ಭೀಮರ ದುಃಖ ಚಿತ್ರಿತವಾಗಿದೆ. 'ರಮಾ ನೀನು ನನ್ನ ಬಿಟ್ಟು ಹೋಗುತ್ತಿದ್ದಿಯಾ, ಜನ್ಮದ ಜೋಡಿಯನ್ನು ಮುರಿದು ಹಾಕಿ ಹೋಗುತ್ತಿದ್ದಿಯಾ ? ಎಂಬ ಪ್ರಶ್ನೆ ರಮಾಬಾಯಿಗೆ ಭೀಮ ಬಾಬಾರು ಕೇಳುತ್ತಾರೆ.

ಇದು ಸತ್ಯದ ಮಾತು ಆಗಿದೆ. ಇಂದು ಎಲ್ಲಾ ಕಡೆ ಬಾಬಾ ಸಾಹೇಬ ಅಂಬೇಡ್ಕರರ ಹೆಸರು ಕೇಳಿಬರುತ್ತಿದೆ. ಬಾಬಾ ಸಾಹೇಬರು ತಮ್ಮ ಜೀವನದಲ್ಲಿ ಎಲ್ಲರನ್ನು ವಿರೋಧ ಮಾಡಿ, ಸಮಾಜವನ್ನು ಕಾಪಾಡಿದ, ಗುಲಾಮಗಿರಿಯನ್ನು ಹೋಗಲಾಡಿಸಿ ಕೋಟಿ ಕೋಟಿ ದಲಿತರ ಉದ್ಧಾರ ಮಾಡಿದರು. ಬುದ್ಧ ತತ್ವಗಳನ್ನು ಸರಳವಾಗಿ ಭೀಮ ಬಾಬಾರು ಬೋಧಿಸಿದರು. ಜ್ಞಾನದ ಹೊಸ ರವಿ ಹುಟ್ಟಿದ ಹಾಗೆ ಭೀಮ ಜನನಿ, ಅವರ ಕೀರ್ತಿ ಅವರವಾಯಿತು.

ಜಿವಾಲಾ ಜಿವಾಚ ದಾನ
ಮಾಜಾ ಭೀಮಾನ ಕೆಲ
ಶಿಕವುನಿ ಜೀವಾಚ ರಾನ
ಮಾಜಾ ಭೀಮಾನ ಕೆಲ ॥ ೨ ॥

ಸಾರೆಯ ಮಹಾರ ಮದಿ
ಮೆಟ್ರಿಕ್ ನಹೂತ ಕೋಣಿ

---

೭. ಧ್ವನಿ ಸುರಳಿ ಸಂಗ್ರಹ.
೮. ಅದೇ
೯. ಅದೇ

ವೇಷ ಘೆವುಣಿ ಅಲಿ ಭೀಮುಚಿ
ಲೇಖಣಿ;
ಅಸ ಅಮೃತಾ ಚ ಪಾನ
ಮಾಜಾ ಭೀಮಾನ ಕೆಲ
ಶಿಕವುನಿ ಜೀವಾಚರಾನ
ಮಾಜಾ ಭೀಮಾನ ಕೆಲ ॥ ಜಿವಾಲಾ ಜೀವಾಚ ॥ [೧೦]

ದಲಿತರಿಗೆ ಜೀವ ನೀಡಲು ತಮ್ಮ ಜೀವವನ್ನೇ ದಾನ ಮಾಡಿದ ಮಹಾದಾನಿ ಭೀಮಬಾಬಾ ಎಂದು ಈ ಹಾಡಿನಲ್ಲಿ ವ್ಯಕ್ತವಾಗಿದೆ. ವಿದ್ಯೆ, ಓದು ಎಂದು ಮಗ್ನರಾಗಿ ಆರೋಗ್ಯದ ಕಡೆಗೆ ಅವರು ಗಮನ ಹರಿಸಲಿಲ್ಲ. ಮಹಾರ ಜಾತಿಯಲ್ಲಿ ಯಾರು ಹತ್ತನೆ ತರಗತಿಯಲ್ಲಿ ಉತ್ತೀರ್ಣ ಆಗಿರಲಿಲ್ಲ. ಆ ಕಾರ್ಯವನ್ನು ಮಾಡಿ ತೋರಿಸಿ, ಅವರ ಲೇಖನಿ ಕಾರ್ಯಕ್ಕೆ ಸಾಧನವಾಗಿ ಮೂಡಿ ಬಂದಿತು;, ಇಂಥ ಅಮೃತದಂತಹ ದಾರಿ ತೋರಿಸಿದರು. ಬಡವನ ಮನೆಯಲ್ಲಿ ಹುಟ್ಟಿದರೂ ಸಹ ಓದಬೇಕೆಂಬ ಛಲ ಇತ್ತು. ಉನ್ನತ ವಿದ್ಯಾಭ್ಯಾಸಕ್ಕಾಗಿ ಅಮೇರಿಕಾಗೆ ಪ್ರಯಾಣ ಬೆಳೆಸಿದರು ಎಂದು ಅವರ ಸಾಧನೆ ಕುರಿತು ಮೇಲಿನ ಹಾಡಿನಲ್ಲಿ ಹೇಳಲಾಗಿದೆ.

ಮಾಜಾ ಭೀಮಾಚ ನಾವಚ ಹೊ ಹೊ
ಮಾಜಾ ಭೀಮಾಚ ನಾವಚ
ಕುಂಕು ಲಾವಿಲೇ ರಮಾಯಿ ॥ ಪ ॥ಸ [೧೧]

ಪ್ರಸ್ತುತ ಹಾಡಿನಲ್ಲಿ ಭೀಮಬಾಬಾ ಪತ್ನಿ ರಮಾಬಾಯಿ ಯಾವ ರೀತಿ ಪತ್ನಿ ಧರ್ಮ ನಿಬಾಯಿಸಿದರು ಎಂದು ಹೇಳಲಾಗಿದೆ. ನನ್ನ ಭೀಮಾನ ಹೆಸರಿನ ಕುಂಕುಮವನ್ನು ರಮಾಬಾಯಿ ಹಚ್ಚಿಕೊಂಡಳು. ರಮಾಬಾಯಿಯ ಜೀವನದ ಅನುಭವವನ್ನು ಮಂಜುಳವಾಣಿಯಂತೆ ಕೇಳಿರಿ.

ಹಿಂದಿ ಹಾಡುಗಳಲ್ಲಿ ಬಾಬಾ ಸಾಹೇಬರು

ರಾಷ್ಟ್ರ ಭಾಷೆಯಾದ ಹಿಂದಿಯಲ್ಲಿಯೂ ಬಹಳಷ್ಟು ಹಾಡುಗಳು ರಚನೆಗೊಂಡಿವೆ. ಗೀತೆಗಳು ಅವರ ಮೇಲಿರುವ ಅಪಾರ ಅಭಿಮಾನಿಗಳ ಅಭಿಮಾನದಿಂದ ರೂಪಗೊಂಡಿವೆ.

ಜೈ ಭೀಮವಾಸಿ ನಿಶಾನ ಲಗಾ ಎ
ದುನಿಯಾ ಬುಲಾತಿ ಹೈ ಆ
ಎ ಹಿಮ್ಮತ ತು ದೀಖಾ ಆ ಆ ಆ [೧೨]

ಮೇಲಿನ ಹಾಡಿನಲ್ಲಿ ಭೀಮ ಭಕ್ತರನ್ನು ಕುರಿತು ಗುರಿಯಿಟ್ಟು ಕೊಂಡು ಜೈ ಭೀಮವಾಸಿಗಳೇ ಭೀಮ ಬಾಬಾರನ್ನು ಕರೆಯುತ್ತಿದ್ದಾರೆ.

"ಜೈ ಭೀಮ ರಾಹ ಧಿಕಾಯೆ ಉಸರಾಹ ಪರ
ಚಲನಾ ತು ಚಲತೆ ಚಲತೆ
ರೊಕನಾ ಮತ ದುನಿಯಾದಾರಿ ಕೊ
ಬತನಾ ಹಾ ಹಾ ಹಾ
ಎ ಬೀಮ ಕಾ ಇಶಾರಾ" [೧೩]

---

೧೦. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ವೈಶಾಲಿ ಸುಲಾಪುರ ಮಹಾರಾಷ್ಟ್ರ, ದಿ:೦೯-೦೮-೦೯ ರಂದು ಭೇಟಿ ಮಾಡಲಾಯಿತು.
೧೧, ೧೨, ೧೩ ಅದೇ

ಮೇಲಿನ ಹಾಡಿನಲ್ಲಿ ಇಡೀ ಲೋಕವೇ ಅಂಬೇಡ್ಕರನ್ನು ಪುನಃ ಮರಳಿ ಬರಲು ಕರೆಯುತ್ತಿದೆ. ಭೀಮ ಮಾರ್ಗದಲ್ಲಿ ನಾವು ನಡೆಯೋಣಾ, ಎಂದು ಆ ದಾರಿಯಲ್ಲಿ ನಿಲ್ಲಬಾರದು, ಎಂಬ ಆಶಯ ಅಭಿವ್ಯಕ್ತವಾಗಿದೆ.

ಭೀಮ ಯಾದ ಆಯೆ ದಿಲ್ ಕೊ ಸತಾಯೆ
ಸಪನೆ ದಿಖಾಕೆ ಹಮೆ ತಡಪಾಯೆ
ಛೋಡ ಚಲೆ ತುಮ ಇಸ ಧರತಿಕೊ
ಮಿಲಕರ ಬೋಲೊ ಜಯ ಭೀಮ ಬೋಲೋ ॥ ಭೀಮಯಾದ ॥ [೧೪]

ಪ್ರಸ್ತುತ ಹಾಡಿನಲ್ಲಿ ಯಾವ ರೀತಿ ಪ್ರೇಮಿಗಳಿಗೆ ವಿರಹ ಆಗುತ್ತದೆಯೋ ಅದೇ ರೀತಿ ಭೀಮ ಬಾಬಾರ ಮೇಲೆ ಇರುವ ಭಕ್ತಿಯ ಪ್ರೇಮದಿಂದ ಅವರು ಭೀಮರ ಅಗಲಿಕೆ ಸಹಿಸಲಾರರು. ಭೀಮ ಅವರ ನೆನಪಿನಲ್ಲಿ ಇದ್ದು ಭಕ್ತ ಜನರ ಮನಸ್ಸನ್ನು ಕಾಡುತ್ತಾರೆ. ಕನಸಿನಲ್ಲಿ ಬಂದು ಸತಾಯಿಸಿ ಹೋಗುತ್ತಾರೆ. ಲೋಕವನ್ನು ಬಿಟ್ಟು ಹೋದ ನಿಮಗೆ ನಾವೆಲ್ಲರೂ ಕೂಡಿ, 'ಜಯ ಭೀಮ' ಎಂದು ಪ್ರಾರ್ಥಿಸೋಣಾ.

ಹಿಂದಿ ಹಾಡುಗಳಿಗೆ ಸಿನಿಮಾ ಹಾಡುಗಳ ದಾಟಿ (ರಾಗ) ಇರುವುದು ಸೋಜಿಗ ಎನಿಸುತ್ತದೆ.

## : ಅಂಬೇಡ್ಕರ ಹಾಡುಗಳಲ್ಲಿ ಅಲಂಕಾರ – ಪ್ರಾಸ :

ಶಿಷ್ಟ ಸಾಹಿತ್ಯದ ಅಲಂಕಾರ, ಪ್ರಾಸಗಳು ಜಾನಪದ ಹಾಡುಗಳಲ್ಲಿ ಬಳಕೆಯಾಗಿದೆ. ಈ ಕಾರಣದಿಂದಲೇ ಜಾನಪದ ಸಾಹಿತ್ಯ ವಿಶಿಷ್ಯ ಸಾಹಿತ್ಯವಾಗಿದೆ. ಕಾರಣ ಆಡು ಮಾತಿನ ಹಾಡುಗಳಲ್ಲಿ ವಿದ್ಯೆಯನ್ನೇ ಕಾಣದ ಹಾಡುಗಾರಲ್ಲಿ ಅಲಂಕಾರ, ಪ್ರಾಸಗಳ ಬಳಕೆ ಸಾಮಾನ್ಯ ಮಾತಲ್ಲ. ಜಾನಪದರು ಅನಕ್ಷರಸ್ಥರಾದರೂ ಸಹ ಅವರ ಅಂತರಂಗದಲ್ಲಿ ಭಕ್ತಿ ಶಕ್ತಿಯ ಜ್ಞಾನ ಇರುತ್ತದೆ.

**ಅಲಂಕಾರ :**

ಅಲಂಕಾರಗಳಲ್ಲಿ ಉಪಮಾ ಮತ್ತು ರೂಪಕ ಅಲಂಕಾರವು ಹೆಚ್ಚಾಗಿ ಬಳಕೆಯಾಗಿದೆ. ಆದ್ದರಿಂದಲೇ ಹಾಡುಗಳ ಸೊಗಸನ್ನು ಇಮ್ಮಡಿಸಿದೆ.

"ಕಾರಣ ನಿನ್ನ ಸಾಧನೆ ।
ಮನುಲೋಕದ ಅಮೃತನೇ" [೧೫]

ಇಲ್ಲಿ ಉಪಮಾ ಅಲಂಕಾರ ಬಳಕೆಯಾಗಿದೆ. ಮನುಲೋಕದ ಅಮೃತದಂತೆ ಎಂದು ಅಂಬೇಡ್ಕರರನ್ನು ಹೋಲಿಸಲಾಗಿದೆ.

ಕೋಟಿ ತಾರೆ ನಡುವಿನಲ್ಲಿ । ಚಂದ್ರ ಅಂದ್ರ ।
ಭೀಮ ಬರೆದ ಸಂವಿಧಾನ । ನೀತಿಗೆ ಚಂದ । [೧೬]

ಕೋಟಿ ತಾರೆ ನಡುವೆ ಚಂದ್ರ ಅಂದ ಕಾಣುವಂತೆ ಭೀಮರು ಬರೆದ ಸಂವಿಧಾನ ನೀತಿಗೆ ಚಂದವಾಗಿದೆ. ಇಲ್ಲಿ ಚಂದ್ರ ಅಂದ, ನೀತಿಗೆ ಚಂದ್ರಕ್ಕೆ ಹೋಲಿಸಲಾಗಿದೆ. ಆದಕಾರಣ ಇಲ್ಲಿ 'ಉಪಮಾ ಅಲಂಕಾರ' ಬಳಕೆಯಾಗಿದೆ.

---

೧೪. ಧ್ವನಿಸುರಳಿ ಸಂಗ್ರಹ
೧೫. ಅದೇ
೧೬. ಅದೇ

ಭೀಮ ದೇವರ ತೋಟ
ಏಳಿರಿ ದಲಿತರ ಬನ್ನಿವೇಗ ಓಡುತ
ನೀಲಂ ಕಲ್ಮಿ ಮಾವಿನ ಹಣ್ಣು ಭೀಮದೇವರ ತೋಟ । [೧೭]

ಇದೊಂದು ಸುಂದರವಾದ ರೂಪಕವಾಗಿದೆ. ಇಲ್ಲಿ ಭೀಮ ದೇವರ ತೋಟವನ್ನು ಅವರ ಕಾರ್ಯ ಸಾಧನೆಗೆ ಭೇದವಿಲ್ಲದೆ ಹೋಲಿಕೆ ಮಾಡಲಾಗಿದೆ.

ದೀನದಲಿತರ ಪರಮಾತ್ಮನೇ
ಬುದ್ಧ ದೇವನೆ – ಭೀಮ ಬಾಬಾನೆ ॥ [೧೮]

ಇಲ್ಲಿ ಉಪಮಾ ಅಲಂಕಾರ ಬಳಸಲಾಗಿದೆ. ಭೀಮ ಬಾಬಾಸಾಹೇಬರನ್ನು ಪರಮಾತ್ಮನೆಂದು ಸಾದೃಶ್ಯ ಹೋಲಿಕೆ ಇದೆ.

**<u>ಪ್ರಾಸಗಳು :</u>**

**ಅಂತ್ಯ ಪ್ರಾಸ**

ನಮಗಾಗಿ ಭೀಮ ಬಂದು। ದಾರಿ ತೋರಿ
ಮರೆಯಾದ। ಪ್ರಜ್ವಲಿಸೋ ಬೆಳಕು ಬಿರಿ [೧೯]

ಇಲ್ಲಿನ 'ತೋರಿ', 'ಬರಿ ಪದಗಳ 'ಇ'ಕಾರ ಅಂತ್ಯಪ್ರಾಸವಾಗಿದೆ.

ಅವುತಾರ ಭೀಮ ದೇವ ಅಂಬೇಡ್ಕರ
ಮಕ್ಕಳು ಬಂದು ನಿಂತಾರೊ ನಿನ್ನಯ ಎದುರ [೨೦]

ಅಂಬೇಡ್ಕರ ಎದುರ ಎಂಬ ಪದಗಳು ಅಂತ್ಯಪ್ರಾಸಗಳಗಿವೆ, ಬಳಕೆಯಾಗಿದೆ.

ಓ ನಮ್ಮ ದಾತನೇ ನಮ್ಮ ದೇವನೇ
ಏಕೆ ನಮ್ಮ ಬಿಟ್ಟಿದೆ । ಮತ್ತು ಮರಳಿ ಬಾರದೆ
ನಿನ್ನಿಂದ ನಾವು ಇಂದು । ಮನುಷ್ಯರಾದೇವೂ
ಓ ನಮ್ಮ ದಾತನೇ । ನೀ ನಮ್ಮ ದೇವನೇ [೨೧]

ಓ ಎಂಬುದು ಸಂಬೋದನೆ ಹಾಗೂ 'ನಮ್ಮ' ಪದವು ಆದಿಪ್ರಾಸವಾಗಿ ಬಳಕೆಯಾಗಿದೆ.

ಚಿಲ್ಲರ್ಗಿ ಊರಲ್ಲಿ ಬುದ್ಧ ಪ್ರಭು ದೇವರಲ್ಲಿ
ನಿಮ್ಮ ಅಂತರಂಗದಲ್ಲಿ ಭೀಮ ತಂದೆ ಆತ್ಮದಲ್ಲಿ
ಬಾಬರ ಪದ್ಯ ಹಾಡಿ ದಲಿತರು ನಲಿಯಲಿ ॥ ಮಕ್ಕಳು ॥ [೨೨]

ಇಲ್ಲಿನ 'ದೇವರಲ್ಲಿ', 'ಆತ್ಮದಲ್ಲಿ' ಎಂಬ ಆಧ್ಯಾತ್ಮಿಕ ಪದಗಳು ಅಂತ್ಯ ಪ್ರಾಸಗಳಾಗಿವೆ.

---

೧೭. ಈಶ್ವರರಾವ ಎಂ.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೧೫, ಪ್ರ.ವ.೧೯೯೭

೧೮. ಅದೇ

೧೯. ಅದೇ

೨೦. ಅದೇ ಪು.೧೦

೨೧. ಅದೇ

೨೨. ಅದೇ

**ಜೋಡು ನುಡಿಗಳು :**

- ❖ 'ಬ್ರಹ್ಮಂಡ ಒಂದು, ಭೂಲೋಕ ಅಂದ'. [೨೩]
- ❖ 'ನರಜನಕ್ಕೆ ನೀ ಬಂದಿ, ಈ ಸಂಸಾರ ಏನಿಲ್ಲಂದಿ'. [೨೪]
- ❖ 'ಹಿಂದೂ ಧರ್ಮಕ್ಕೆ ಮರುಗಿ, ದಲಿತರೆಲ್ಲರು ಕರಗಿ', [೨೫]

**ಜಾಣ್ನುಡಿಗಳು :**

- ❖ 'ಸದ ಅತ್ತೆ ಕಾಲ ಶಾಶ್ವತ ಉಳಿಯೊದಲ್ಲ'. [೨೬]
- ❖ 'ಎಷ್ಟೋ ರುಚಿ ಭೀಮ ನಾಮ'. [೨೭]

**ವ್ಯಂಗ್ಯೋಕ್ತಿ :**

- ❖ 'ಬುದ್ಧ ದೇವನ ಜಯಕ್ಕೆ ಇಲ್ಲದವ ಥೇಟ ಅಡಿಹಂದಿ'. [೨೮]
- ❖ 'ಗೋಡೆಗೆ ಕುಂತಿರಿ ವರಗಿ'. [೨೯]

ಇಂಥ ಹಲವಾರು ಜೋಡು ನುಡಿಗಳು, ಜಾಣ್ನುಡಿಗಳು, ವ್ಯಂಗೋತ್ತಿಗಳು ಬಾಬಾಸಾಹೇಬರ ಹಾಡುಗಳಲ್ಲಿ ಹೋಳಪನ್ನು ನೀಡುತ್ತವೆ.

**ವಿಶಿಷ್ಟ ಪದರಚನೆ**

ತತ್ವಪದ, ಆಧ್ಯಾತ್ಮಿಕತೆಯ ಪದಗಳು ಬಳಕೆಗೊಂಡಿದೆ.

"ತ್ರೇತಾ ಯುಗದೊಳಗಾ ಬಾಣ ಧನುಷ್ಯ
ದ್ವಾಪರ ಯುಗದೊಳಗ ಚಕ್ರಾಸುದರ್ಶ" [೩೦]

ತ್ರೇತಾಯಗ, ಧನುಷ್ಯ, ದ್ವಾಪರ, ಸುದರ್ಶ ಬಾಣ ಎಂಬ ಶಿಷ್ಟ ಪದಗಳ ಬಳಕೆಯಾಗಿದೆ.

'ಜಗದೊಳಗೆ ಜನಸಿರೆಲ್ಲ ಭರತ ಮಡಿಲಲ್ಲೆಲ್ಲ
ಬಾಬರ ಹೊರತ ನಮಗ್ಯಾರಿಲ್ಲ ತಿಳಿದು ನಡಿರಿ ಜನರೆಲ್ಲಾ ಖುಲ್ಲಾ'

ಖುಲ್ಲಾ ಎಂಬ ಉರ್ದು ಪದವು, ಮುಚ್ಚು ಮರೆ ಮಾಡದೆ, ಸ್ವಚ್ಛಂದದ ಅರ್ಥ ನೀಡುತ್ತದೆ, ದಲಿತ ಜನರೇ ನೀವು ಏನು ಮನಸ್ಸಿನಲ್ಲಿ ಮುಚ್ಚಿಡದೆ, ನಮ್ಮನ್ನು ಯಾರು ತಿಳಿದುಕೊಂಡಿದ್ದಾರೆ ? ಎನ್ನುವ ಸಂದರ್ಭದಲ್ಲಿ ಈ ಪದ ಬಳಸಲಾಗಿದೆ.

ಶಾಲಿ ಮೇಲೆ ಇಡಾರಿ ಲಕ್ಷ
ವಿದ್ಯೆ ಬುದ್ಧಿ ಕಲಿಯಿರಿ ಪಕ್ಕ [೩೧]

ನಿಶ್ಚಯವಾಗಿ, ದೃಢವಾಗಿ ಎಂಬ ಅರ್ಥದಲ್ಲಿ'ಪಕ್ಕ' ಎಂಬ ಆಡು ಮಾತಿನ ಪದ ಬಳಕೆಗೊಂಡಿದೆ.

ಜಾತಿ ವರ್ಗ ಪಾಚವಿ ಓದಿ, ಪಂಚಾಕ್ಷರಿಯ ತಿಳಿಯನು ಬಾ
ಸಾವಿ ವರ್ಗ ಷಡಕ್ಷರಿ ಶಬ್ದ ನುಡಿಯನು ಬಾ [೩೨]

---

೨೩. ಈಶ್ವರರಾವ ಎಂ.ಕರುಣಾ ಸಾಗರ (ಲೇ) ಧಮ್ಮ ಸಂದೇಶ ಗೀತೆಗಳು ಪು.೭೮, ಪ್ರ.ವ.೧೯೯೭

೨೪, ೨೫, ಅದೇ

೨೬. ಕ್ಷೇತ್ರ ಕಾರ್ಯದಲ್ಲಿ ಹಾಡಿದವರು ಆರತಿ ಮು. ಮಂಠಾಳ ದಿ:೦೫-೦೭-೦೯ ರಂದು ಸಂದರ್ಶಿಸಲಾಯಿತು.

೨೭, ೨೮, ೨೯, ೩೦, ೩೧, ೩೨ :- ಅದೇ

ಇಲ್ಲಿ ಪಂಚಾಕ್ಷರಿ, ಷಡಕ್ಷರಿ, ತ್ರಿಗುಣ, ಸಪ್ತೇಸನ, ನೌದ್ವಾರ, ದಸವಿಂದ್ರ, ಎಂಬ ವಿಶಿಷ್ಟ ಪದಗಳಿಂದ ಈ ಮೇಲಿನ ಸಾಲು ಆಧ್ಯಾತ್ಮಿಕವಾಗಿ ರಚನೆಯಾಗಿದೆ.

* **ಮರಾಠಿ ಪದಗಳು** : ಭಾತಿ, ಜನ್ಮಾಚೆ, ಜಿವಲಾ, ಅಮೃತಾಚ ಪಾನ, ಖರ, ಮಂಜುಳ ವಾಣಿ, ಇತ್ಯಾದಿ

* **ಹಿಂದಿ ಪದಗಳು** : ನಿಶಾನ, ದುನಿಯಾ, ಹಿಮ್ಮತ, ರಾಹೆ, ದಿಲ್, ಸಪನೆ, ಯಾದ, ಸತಾಯೆ, ತಡಪಾಯೆ, ಘೋಡ, ಧರತಿ ಮುಂತಾದವು

* **ದೇಸಿ ಪದಗಳು** : ತೊತ್ತು, ವಿದ್ರ, ಹುಟ್ಟಿ, ಬಿಟ್ಟಿ, ಗಿಟ್ಟ, ಸುಟ್ಟಿ, ವಿಟ್ಟಿ, ಅಂಗ್ರೇಜ್ ರಾಷ್ಟ್ರ, ಬುತ್ತಿ ಇತ್ಯಾದಿ

### ಸಂಗೀತದ ಸಾಹಚರ್ಯ :

ಸಂಗೀತವು ಮಧುರ, ರಾಗದಿಂದ ಜೀವನದಲ್ಲಿ ಚೈತನ್ಯ, ಉತ್ಸಾಹ ನೀಡುತ್ತದೆ ಹಾಗೂ ದುಃಖ, ಕಷ್ಟ ಮರೆಸುತ್ತದೆ. ಕರ್ನಾಟಕದ ಸಾಂಸ್ಕೃತಿಕ ಕೊಡುಗೆಗಳಲ್ಲಿ ಸಂಗೀತದ ಪಾತ್ರ ವಿಶೇಷವಾಗಿದೆ. ಸಂಗೀತದ ಉಗಮ ವೇದಗಳ ಕಾಲ ಪೂರ್ವದಲ್ಲೇ, ಮಾನವ ಶಬ್ದ ಬಳಕೆ ಮಾಡಲು ಆರಂಭಿಸಿದಾಲೇ ಸಂಗೀತದ ಉಗಮವು ಆಗಿರಬಹುದು. ಜಾನಪದರ ಜೀವನದ ಸುಖ, ದುಃಖಗಳ ಪಾಡು, ಹಾಡುಗಳಾದವು, ಮುಂದೆ ಸಾಂಪ್ರದಾಯಿಕ ಹಾಡುಗಳಿಂದ ಉಗಮಗೊಂಡು, ವಚನ, ಕೀರ್ತನೆ ಹಾಡುಗಳಿಂದ ವಿಕಾಸದ ತುತ್ತತುದಿ ಮುಟ್ಟಿತು. ಹಾಡುಗಳಿಗೆ ವಾದ್ಯ ಲಯ ಸೇರಿ ಸಂಗೀತವಾಗಿರಬಹುದು. ಸಂಗೀತವನ್ನು ಭಕ್ತಿ ಹಗೂ ಮನೋರಂಜನೆ ಬಳಸಲಾಗುತ್ತದೆ.

ಭೀಮ ಬಾಬಾರ ಭಜನೆಗಳು ಭಕ್ತಿ ಪ್ರಧಾನವಾದುದು. ಭಜನೆಗಳನ್ನು ಹಾಡಲು ಪೇಟಿ, ತಬಲಾ, ಏಕತಾರಿ ಎಂಬ ಕೆಲವು ಸಂಗೀತವಾದ್ಯಗಳನ್ನು ಬಳಸುತ್ತಾರೆ. 'ಬುದ್ಧ ವಂದನೆ'ಯಿಂದ ಆರಂಭಗೊಳ್ಳುವ ಹಾಡುಗಳಲ್ಲಿ ಕೆಲವು ಮುದ್ರಾದಿಂದ ಕೊನೊಗೊಳ್ಳುತ್ತದೆ.

"ಬುದ್ಧಿವಂತರ ಸಹವಾಸ ಮಾಡೊ
ಬುದ್ಧಿಕೇಡಿಯ ಸಹವಾಸ ಬ್ಯಾಡೊ" [೩೩]

ಎಂಬ ಈ ಮುದ್ರಾವನ್ನು ಆದಿ ಅನಾಡಿ ತತ್ವ ಬೋಧ ಯಾರಿಗೆ ಗೊತ್ತ ಎಂಬ ಹಾಡಿನಲ್ಲಿದೆ. ಇಲ್ಲಿ ಬುದ್ಧಿಗೇಡಿಯ ಸಹವಾಸ ಕತ್ತಲದೊಳಗೆ ಇದ್ದು ಕುರುಡನ ಕೈ ಕೈ ಸವರಿದ ಹಾಗೆ ಆಗುತ್ತದೆ. ಆದ ಕಾರಣ ಬೌದ್ಧ ಧರ್ಮಕ್ಕೆ ಶರಣಾಗಿ ಶುದ್ಧಾಗಿ ನಡೆಯಿರಿ ಎಂಬ ನೀತಿಯನ್ನು ಬೋಧಿಸಲಾಗಿದೆ, ಭಜನೆ ಜನರಿಗೆ ಆನಂದ ಹಾಗೂ ನೀತಿ ಲಭಿಸುತ್ತದೆ. ಈ ರೀತಿ ಬಾಬಾಸಾಹೇಬರ ಹಾಡುಗಳಲ್ಲಿ ಸಂಗೀತದ ಸಾಹಚರ್ಯೆ ಒಳಗೊಂಡಿದೆ.

---

೩೩. ಕ್ಷೇತ್ರ ಕಾರ್ಯ ವಕ್ತಾರಾರು ಕಮಲಮ್ಮ ಮು.ಧನ್ನೂರ ದಿ:೨೪-೦೮-೦೯ ರಂದು ಭೇಟಿ.

# ಅಧ್ಯಾಯ – ೩

## ಸಮಾರೋಪ

ಡಾ.ಬಿ.ಆರ್.ಅಂಬೇಡ್ಕರರು ಸಾವಿರಾರು ವರ್ಷಗಳಿಂದ ಯಾವ ಧರ್ಮವು ಮಾಡಲಾಗದಂತಹ ದಲಿತ ಉದ್ದಾರವನ್ನು ಕೇವಲ ೩೦ ವರ್ಷಗಳಲೇ ಮಾಡಿ ತೋರಿಸಿದ ಮಹಾನ್ ವಿಚಾರವಾದಿ, ಅಲ್ಲದೆ ದೇವರ ಬಗ್ಗೆ ದಲಿತರಲ್ಲಿದ್ದ ಊಹಾತ್ಮಕ ಭಯವನ್ನು ಬೇರು ಸಹಿತ ಕಿತ್ತು ಹಾಕಲು ಹೋರಾಟ ಮಾಡಿದ ಧೀರವಂತರು. ಬಾಬಾ ಸಾಹೇಬರು ಎಂದಿಗೂ ಹಿಂದೂ ಧರ್ಮವನ್ನು ವಿರೋಧಿಸಲಿಲ್ಲ, ಆದರೆ ಅದರಲ್ಲಿರುವ ಅಂಧಾಚರಣೆ, ಮೂಡನಂಬಿಕೆಯನ್ನು ಖಂಡಿಸಿದರು ಇವರ ಮಹಾಕಾರ್ಯ ಅರಿತು ದಲಿತರಲ್ಲಿ ಇಂದು ಅಂಬೇಡ್ಕರ ವಾದ ಒಂದು ಪರಂಪರೆಯಾಗಿ ಜನಪದರ ಬದುಕಿನಲ್ಲಿ ಹಾಸು ಹೊಕ್ಕಾಗಿ ಸೇರಿಕೊಂಡಿದೆ ಎಂದು ಈ ಅಧ್ಯಯನದಿಂದ ವಿಧಿತವಾಗುತ್ತದೆ. ಬೀದರ ಜಿಲ್ಲೆಯ ಹಳ್ಳಿಗಳಲ್ಲಿ ಭಜನ ಸಂಘ, ದಲಿತ ಸಂಘ, ಭಜನ ಮೇಳಗಳು ನಿರಂತರವಾಗಿ, ಉತ್ಸಾಹದಿಂದ ಭಜನೆ ಹಾಡುಗಳನ್ನು ಹಾಡುತ್ತಿದ್ದಾರೆ. ಆದ ಕಾರಣ ಹಾಡುಗಳ ಮೇಲೆ ಆಸಕ್ತಿ ಹೆಚ್ಚಾಗಿತ್ತಿದೆ. ಹಾಗೆ ಹೊಸ–ಹೊಸ ಹಾಡುಗಳು ರಚನೆಗೊಳ್ಳುತ್ತಿವೆ. ಕಾಲ–ಕಾಲಕ್ಕೆ ತಕ್ಕಂತೆ ಹಾಡುಗಳ ರಚನೆಯಲ್ಲಿ ಬದಲಾವಣೆ ಅನಿವಾರ್ಯ, ಆದರೂ ಬುದ್ಧ–ಭೀಮರ ಮೇಲಿರುವ ಅಚಲ ಭಕ್ತಿ ಸ್ಥಿರವಾಗಿ, ಯಾರು ಅಲ್ಲಾಡಿಸದಂತೆ ಶಾಶ್ವತವಾಗಿದೆ. ಯವುದೇ ತಾರತಮ್ಯ ಭವ ಇಲ್ಲದೆ ಪುರುಷ, ಮಹಿಳೆ, ಮಕ್ಕಳು, ವೃದ್ಧರು, ಉಲ್ಲಾಸದಿಂದ ಹಾಡುತ್ತಾರೆ. ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ೮೦ – ೧೦೦ ಹಾಡುಗಳವರೆಗೆ ಹಾಡುಗಳನ್ನು ಸಂಗ್ರಹ ಮಾಡಲಾಗಿದೆ. ಇವು ಸಮಗ್ರ ಸಂಗ್ರಹವಲ್ಲ, ಕೇವಲ ಪ್ರಾತಿನಿಧಿಕವೆಂದು ಭಾವಿಸಲಾಗಿದೆ.

ಹೈದ್ರಾಬಾದ ಕರ್ನಾಟಕದ ಭಾಗದಲ್ಲಿ ಅಂಬೇಡ್ಕರ ಹಾಡುಗಳು ಸಾವಿರಕ್ಕಿಂತಲೂ ಹೆಚ್ಚಾಗಿವೆ. ಈ ಹಾಡುಗಳ ಅವಲೋಕನದಿಂದ ದಲಿತರ ಜಗತ್ತು ಸಾಗುವ ಸ್ಥಿತಿಗತಿ ಕಾಣಬಹುದು, ದಲಿತರ ಸ್ವಾಭಿಮಾನ, ರಾಜಕೀಯ ಪ್ರಜ್ಞೆ ಎಚ್ಚರ ಗೊಂಡಿದಿಯೇ ? ಅಥವಾ ಇನ್ನು ಜಾಗೃತೆ ತಿಳಿಯುವ ಅವಶ್ಯಕತೆ ಇದೆಯೇ ? ಎಂಬ ಪ್ರಶ್ನೆಗಳಿಗೆ ಉತ್ತರ ಹುಡುಕಬಹುದು.

ಡಾ. ಅಂಬೇಡ್ಕರರು ಒಂದು ಜನಾಂಗವನ್ನು ಕತ್ತಲೆಯ ಕೂಪದಲ್ಲಿಟ್ಟು ಶೋಷಿಸಿದ ವ್ಯವಸ್ಥೆಯ ವಿರುದ್ಧ ಬಂಡೆದ್ದರು. ಒಂದು ಇಡೀ ಜನವರ್ಗದ ಜೀವನದಲ್ಲಿ ಹೊಸ ಚೈತನ್ಯವನ್ನು ತುಂಬಿ ಸಾಮಾಜಿಕವಾಗಿ, ರಾಜಕೀಯವಾಗಿ ಅದನ್ನು ಜಾಗೃತವಾಗಿಸಿದ ಶ್ರೇಯಸ್ಸು ಇವರದು. ದಲಿತ ಪ್ರಜ್ಞೆಗೆ ಮಹಾ ಚೇತನ ನೀಡು ಇವರ ವಿಚಾರಗಳು ಚಿಂತನೆಗಳು ಈ ದೇಶದ ಎಲ್ಲಾ ಭಾಷೆಗಳಲ್ಲಿ ಅನುವಾದಗೊಂಡು ಪ್ರಸಾರವಾಗಬೇಕಾದ ಅಗತ್ಯವಿದೆ. ತಮ್ಮ ಜೀವನದ ಕೊನೆಯ ಉಸಿರಿನವರೆಗೂ ದಲಿತರ ಪರವಾಗಿ ಡಾ. ಅಂಬೇಡ್ಕರ ಅವರ ಚಿಂತನೆಗಳನ್ನು ಕಾರ್ಯರೂಪಕ್ಕಿಳಿಸುವ ಹೊಣೆ ದಲಿತರ ಮುಂದಿದೆ.

ಬಾಬಾ ಸಾಹೇಬರು ದಲಿತ ಭಾವುಕರ ಪರ್ಯಾಯ ದೇವರು ಆಗಿ ಬೌದ್ಧ ಧರ್ಮ ನಮ್ಮ ಬಿಡುಗಡೆಯ ಮಾರ್ಗವೆಂದು ತೋರಿಸಿದ ಮಹಾಶಕ್ತಿ. ಕರುಣಾಳು ಬುದ್ಧ, ಮಾನವೀಯ ಅನುಕಂಪೆಯ ಸಾಕಾರ ಮೂರ್ತಿ ಬಸವೇಶ್ವರ ಹಾಗೂ ಕಹಿ ಉಂಡು ಕರ್ತೃತ್ವ ಶಕ್ತಿಯಿಂದ ಕೀರ್ತಿ ಶಿಖರಕ್ಕೇರಿದ

ಬಾಬಾಸಾಹೇಬ ಅಂಬೇಡ್ಕರ್ ಈ ಮೂವರೂ ಭಿನ್ನ ಕಾಲಮಾನದಲ್ಲಿ ವಿಭಿನ್ನ ಸಾಮಾಜಿಕ ಆರ್ಥಿಕ ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ ಬಂದವರಾದರೂ, ಇವರನ್ನು ಒಂದೇ ಸೂತ್ರದಲ್ಲಿ ಹಿಡಿದಿರಿಸಬಹುದಾಗಿದೆ. ಸಮತೆಯೇ ಈ ಸೂತ್ರ, ಮಾನವರೆಲ್ಲ ಒಂದೇ. ಅವರೆಲ್ಲ ಸಮಾನರು. ವಿಷಮತೆ, ಶೋಷಣೆಗಾಗಿ ನಿರ್ಮಿತ ಕೃತ್ರಿಮ ವ್ಯವಸ್ಥೆ ಎಂಬುದನ್ನು ಈ ಮೂವರೂ ಅರಿತುಕೊಂಡಿದ್ದರು. ಕರುಣಾರ್ದ್ರ ಹೃದಯಿಗಳಾದ ಇವರು ಮಾನವೀಯ ಅನುಕಂಪೆಯನ್ನು ತಮ್ಮ ರೋಮರೋಮಗಳಲ್ಲಿ ಇಂಗಿಸಿಕೊಂಡವರು. ಸಮಾಜಜೀವಿಯಾಗಿರುವ ಮಾನವ ಪ್ರಾಣಿಯ ದುಃಖದ ತೀವ್ರ ಅರಿವು ಉಳ್ಳ ಇವರು ಅಷ್ಟೇ ತೀವ್ರ ಚಿಂತಕರೂ ಆಗಿದ್ದರು. ಲೋಕೋತ್ತರ ಪ್ರತಿಭೆಯ ಈ ಮಹಾಪುರುಷರು ಮಾನವೀಯ ದುಃಖವನ್ನು ಕುರಿತು ಆಳವಾಗಿ ಚಿಂತಿಸಿ, ತಾತ್ವಿಕವಾಗಿ ಅನ್ವೇಷಿಸಿ, ಪರಿಹಾರೋಪಾಯಗಳನ್ನು ಕಂಡುಹಿಡಿದು ಕಾರ್ಯಪ್ರಣಾಲಿಯನ್ನು ರೂಪಿಸಿದವರು.

ಪ್ರಸ್ತುತ ಇತ್ತೀಚಿನ ದಿನಗಳಲ್ಲಿ ಜಾನಪದ ಬಾಬಾ ಸಾಹೇಬರ ಹಾಡುಗಳು ಗ್ರಾಮೀಣ ಪ್ರದೇಶದಲ್ಲಿ ಪ್ರಚಲಿತವಾಗಿದೆ. ಜಾನಪದರು ಆಧುನಿಕ ಯುಗಕ್ಕೆ ಅಂಟಿದರೂ ಸಹ ಅದಕ್ಕೆ ಮಾರುಹೋಗದೆ ಹಾಡುಗಳ ಸಂಪ್ರದಾಯವನ್ನು ಭಕ್ತಿಯಿಂದ ಆಚರಿಸುತ್ತ ಇದ್ದಾರೆ. ಇಂದು ಆಧುನಿಕ ಪರಿಕರಗಳಾದ ಟಿ.ವಿ. ಸಿನಿಮಾ ಕಂಪ್ಯೂಟರಗಳ ಹಾವಳಿ ಅಧಿಕವಾಗಿದೆ. ಸಮೂಹ ಮಾಧ್ಯಮದ ಪ್ರಭಾವ ಅಧಿಕವಾಗಿದ್ದರಿಂದ ಸಿನಿಮಾ ಹಾಡುಗಳ ದಾಟಿಯಲ್ಲೆ ಅಧಿಕ ಹಾಡುಗಳು ರಚನೆಗೊಂಡಿವೆ. ಇನ್ನೂ ಕೆಲವು ಅಜ್ಞಾನ ದಲಿತರು 'ಭಜನೆ ಹಾಡುಗಳ' ಬಗ್ಗೆ ಆಸಕ್ತಿ ಹೊಂದಿಲ್ಲ, ಇವರಿಗೆ ಜಾಗೃತಿ ಮೂಡಿಸಬೇಕು. ಕಾರಣ ಭಜನೆ ಹಾಡುಗಳಲ್ಲಿ ಬುದ್ಧ-ಭೀಮರ ತತ್ವಗಳು ಒಳಗೊಂಡಿವೆ. ಇದು ಎಲ್ಲ ದಲಿತ ಸಮುದಾಯ ಅರಿತು ಕೊಳ್ಳಬೇಕಿದೆ.

ಹೊಸ ಧರ್ಮವನ್ನು ಆಯ್ಕೆ ಮಡುವಾಗ ಬಾಬಾ ಸಾಹೇಬರು ಬಸವಣ್ಣನಿಗಿಂತ ಆಚೆಗೆ ಸಾವಿರ ವರ್ಷ ಹಿಂದಕ್ಕೆ ಯಾಕೆ ಕೈಚಾಚಿದರು ಎಂಬ ಪ್ರಶ್ನೆ ಏಳುತ್ತದೆ. ತಮ್ಮ ಅಭ್ಯಾಸ ಹಾಗೂ ಚಿಂತನೆಗಳ ಮೂಲಕ ಅಂಬೇಡ್ಕರರು ಬೌದ್ಧ ಧರ್ಮದ ಸತ್ಯವನ್ನು ಅರಿತುಕೊಂಡಿದ್ದರು. ಹಿಂದೂಗಳ ಮನೋಭಾವ ಬದಲಾಗಬೇಕು, ಅದಕ್ಕೆ ಅಗತ್ಯವಾದ ಸನ್ನೀವೇಶ ಸೃಷ್ಟಿಯಾಗಬೇಕು, ಈ ಮಾರ್ಗದಲ್ಲಿ ದಲಿತರು ಶ್ರಮಿಸಬೇಕು ಎಂದು ಬಾಬಾ ಸಾಹೇಬರು ದಲಿತರ ಬಗ್ಗೆ ಚಿಂತನೆ ವ್ಯಕ್ತಪಡಿಸಿದರು. ಡಾ.ಅಂಬೇಡ್ಕರರ ಜೀವನದಿಂದ ಪ್ರಭಾವಿತರಾದ ಭಕ್ತ ಹಾಗೂ ಅಭಿಮಾನ ದಲಿತರಿಗೆ ಅಂಬೇಡ್ಕರರು ದೇವರ ರೂಪಿಯಾಗಿದ್ದಾರೆ. ದಲಿತರ ಹಾಡುಗಳಲ್ಲಿ ಶಾಶ್ವತ ಅಮರರಾಗಿದ್ದಾರೆ.

# ಅನುಬಂಧ

## ೧. ವಕ್ತಾರರ ಪಟ್ಟಿ

i )
* ಹೆಸರು – ಕಮಲಮ್ಮಾ ಚಂದ್ರಕಾಂತ ಭಾವಿಕಟ್ಟಿ
* ಊರು – ಧನ್ನೂರ, ತಾ. ಭಾಲ್ಕಿ, ಜಿ.ಬೀದರ
* ಜಾತಿ – ದಲಿತ
* ಶಿಕ್ಷಣ – ಅನಕ್ಷರಸ್ಥರು
* ಕಾಯಕ – ಕೃಷಿ
* ವಯಸ್ಸು – ೪೫
* ಸಂದರ್ಶಿಸಿದ ದಿನಾಂಕ – ೨೪–೦೮–೦೯

ii )
* ಹೆಸರು – ಸುಭದ್ರಾಬಾಯಿ ಮಾಣಿಕರಾವ ಬೊರೊಳಕರ
* ಊರು – ರಾಜೇಶ್ವರ, ತಾ. ಬಸವ ಕಲ್ಯಾಣ, ಜಿ. ಬೀದರ
* ಜಾತಿ – ದಲಿತ
* ಶಿಕ್ಷಣ – ೧೨ನೇ ತರಗತಿ
* ಕಾಯಕ – ಗೃಹಿಣಿ
* ವಯಸ್ಸು – ೪೩
* ಸಂದರ್ಶಿಸಿದ ದಿನಾಂಕ – ೧೭–೦೭–೦೯

iii )
* ಹೆಸರು – ಆರತಿ ಬಾಯಿ ಲಕ್ಷ್ಮಣ ಕಾಂಬಳೆ
* ಊರು – ಮಂಠಾಳ, ತಾ. ಬಸವ ಕಲ್ಯಾಣ, ಜಿ. ಬೀದರ
* ಜಾತಿ – ಮಹರ
* ಶಿಕ್ಷಣ – ಪಿ.ಯು.ಸಿ.
* ಕಾಯಕ – ಗೃಹಿಣಿ
* ವಯಸ್ಸು – ೩೦
* ಸಂದರ್ಶಿಸಿದ ದಿನಾಂಕ – ೧೫–೦೭–೦೯

iv )
* ಹೆಸರು – ಲಕ್ಷ್ಮಿಬಾಯಿ ಕುಮಸಿ
* ಊರು – ಬರ್ದಾಪುರ ತಾ. ಭಾಲ್ಕಿ , ಜಿ.ಬೀದರ
* ಜಾತಿ – ದಲಿತ
* ಶಿಕ್ಷಣ – ಪಿ.ಯು.ಸಿ.
* ಕಾಯಕ – ಗೃಹಿಣಿ
* ವಯಸ್ಸು – ೩೫
* ಸಂದರ್ಶಿಸಿದ ದಿನಾಂಕ – ೨೦–೦೭–೦೯

v ) * ಹೆಸರು – ಭಾಗುಬಾಯಿ ಸಿಂಧೆ
* ಊರು – ಇಂಚುರ, ತಾ. ಭಾಲ್ಕಿ, ಜಿ.ಬೀದರ
* ಜಾತಿ – ಮಹರ
* ಶಿಕ್ಷಣ – ಬಿ.ಎಡ್. ಪದವಿ
* ಕಾಯಕ – ಉದ್ಯೋಗ
* ವಯಸ್ಸು – ೩೨
* ಸಂದರ್ಶಿಸಿದ ದಿನಾಂಕ – ೨೫-೦೭-೦೯

vi ) * ಹೆಸರು – ಜಯಶ್ರೀ ರಾಮಪ್ಪ ಭಾವಿಕಟ್ಟಿ
* ಊರು – ಚಿಟಗುಪ್ಪಾ,ತಾ. ಹುಮನಾಬಾದ, ಜಿ. ಬೀದರ
* ಜಾತಿ – ದಲಿತ
* ಶಿಕ್ಷಣ – ೧೨ನೇ ತರಗತಿ
* ಕಾಯಕ – ಗೃಹಿಣಿ
* ವಯಸ್ಸು – ೪೩
* ಸಂದರ್ಶಿಸಿದ ದಿನಾಂಕ – ೧೭-೦೭-೦೯

vii ) * ಹೆಸರು – ಲಲಿತಮ್ಮ ವೀರಶಟ್ಟಿ ಕಮವೀರ
* ಊರು – ಧನ್ನೂರು, ತಾ. ಭಾಲ್ಕಿ, ಜಿ. ಬೀದರ
* ಜಾತಿ – ದಲಿತ
* ಶಿಕ್ಷಣ – ಅನಕ್ಷರಸ್ತರು
* ಕಾಯಕ – ಕೂಲಿ
* ವಯಸ್ಸು – ೪೩
* ಸಂದರ್ಶಿಸಿದ ದಿನಾಂಕ – ೨೪-೦೮-೦೯

viii ) * ಹೆಸರು – ವೈಶಾಲಿ
* ಊರು – ಸುಲಾಪುರ ಮಹಾರಾಷ್ಟ್ರ
* ಜಾತಿ – ಮಹಾರ
* ಶಿಕ್ಷಣ – ಡಿ.ಎಡ್.
* ಕಾಯಕ – ವಿದ್ಯಾಭ್ಯಾಸ
* ವಯಸ್ಸು – ೨೨
* ಸಂದರ್ಶಿಸಿದ ದಿನಾಂಕ – ೦೯-೦೮-೦೯

ix ) * ಹೆಸರು – ಅರ್ಜುನರಾವ
* ಊರು – ಹಾರೋರಗೇರಿ ತಾ. ಜಿ.ಬೀದರ
* ಜಾತಿ – ಮಹಾರ
* ಶಿಕ್ಷಣ – ಪದವಿ
* ಕಾಯಕ – ಉದ್ಯೋಗ
* ವಯಸ್ಸು – ೩೫
* ಸಂದರ್ಶಿಸಿದ ದಿನಾಂಕ – ೦೧-೦೮-೦೯

## ೨. ದೇಶಿ ಪದಗಳ ಅರ್ಥ

- ಆರು ವೈರಿ – ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ.
- ಖಾದಿ – ಬಟ್ಟೆಯ ಒಂದು ಪ್ರಕಾರ. (ಉರುಟುಬಟ್ಟೆ).
- ಚೇಡ – ಒಂಟಿಯಾಗಿರುವ, ಸಮಾಜದಿಂದ ದೂರ ಇರುವವರು.
- ಝೋಪಡಿ – ಗುಡಿಸಲು.
- ತ್ರಿಗುಣ – ಬುದ್ಧ, ಧಮಂ, ಸಂಘಂ (ಶಿಕ್ಷಣ, ಹೋರಾಟ, ಸಂಘಟನೆ)
- ನೀಲದಾ – ನೀಳವಾದ ನೀಲಿ ಬಣ್ಣ.
- ನಿರ್ವಾಣ – ಮೋಕ್ಷ, ನಂದಿದ, ಮುಕ್ತ, ಶಾಂತ
- ಪಾಟಿ – ಬರೆಯುವ ಹಲಗೆ, ಆಕಾರ.
- ಪಿಡಿವಲ್ಲೆ – ಹಿಡಿಯುವುದು.
- ಬಿಟ್ಟಿ – ಕರಿಯ ಹಿಕ್ಕಿ.
- ಮತ್ಸಲೋಕ – ಭೂಲೋಕ.
- ಸೂರಜ – ಭಾನು, ಸೂರ್ಯ.
- ಹಳಿಸಿದ್ಧ – ಕಳವಳಗೊಳ್ಳುವುದು
- ಹಾಯಿ – ಮಾರ್ಗ, ಕ್ರಮ.

## ೩. ಛಾಯಾಚಿತ್ರಗಳು



೧. ಜೈ ಭೀಮ ಭಜನ ಸಂಘ, ಜೈ ಬೀಮ ನಗರ, ಬೀದರ.



೨. ಭಜನೆ ಹಾಡುತ್ತಿರುವ ಹೆಣ್ಣು ಮಕ್ಕಳು, ಲುಂಬಿಣಿ ನಗರ, ನೌಬಾದ, ಬೀದರ.

## ೩. ಛಾಯಾಚಿತ್ರಗಳು



೧. ಜೈ ಭೀಮ ಭಜನ ಸಂಘ, ಜೈ ಬೀಮ ನಗರ, ಬೀದರ.



೨. ಭಜನೆ ಹಾಡುತ್ತಿರುವ ಹೆಣ್ಣು ಮಕ್ಕಳು, ಲುಂಬಿಣಿ ನಗರ, ನೌಬಾದ, ಬೀದರ.



೩. ಧನ್ನೂರ ಭಜನಾ ಸಂಘ, ಭಾಲ್ಕಿ.

೪. ಬುದ್ಧ ಮೌಂಟು, ಮನ್ನೆಖೇಳಿ, ಬೀದರ.



೫. ಭವ್ಯ ಬುದ್ಧ ವಿಹಾರ ಗುಲ್ಬರ್ಗಾ.



೬. ಡಾ.ಬಿ.ಆರ್.ಅಂಬೇಡ್ಕರವರು ಪಡೆದ ಧೀಕ್ಷಾ ಭೂಮಿ, ನಾಗಪೂರ.

# ೪. ಗ್ರಂಥ ಸೂಚಿ


| ಕ್ರ.ಸಂ. | ಲೇಖಕರು | ಕೃತಿ | ಪ್ರಕಾಶನ ಹಾಗೂ ವರ್ಷ |
|---|---|---|---|
| ೧. | ಶ್ರೀ ಈಶ್ವರರಾವ್ ಎಮ್.ಕರುಣಾ ಸಾಗರ | ಧಮ್ಮ ಸಂದೇಶ ಗೀತೆಗಳು | ಶಾಮರಾವ ಪ್ರಕಾಶನ ೧೯೯೭ |
| ೨. | ಚೆನ್ನ ಬಸಪ್ಪ ಗೊ.ರು. (ಸಂ) ಮತ್ತು ಇತರರು | ಜಾನಪದ ದರ್ಶನ | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು |
| ೩. | ಜವರಯ್ಯ ಮ.ನ. | ಡಾ.ಅಂಬೇಡ್ಕರ ವಿರಚಿತ ಬುದ್ಧ ಮಾರ್ತು ಗಾಂಧಿ | ಸಿದ್ಧಾರ್ಥ ಗ್ರಂಥಮಾಲೆ ಮೈಸೂರು–೧೯೯೮ |
| ೪. | ದುರ್ಗಾದಾಸ ಕೆ.ಆರ್. | ಭಾರತ ರತ್ನ ಡಾ.ಬಾಬಾ ಸಾಹೇಬ ಅಂಬೇಡ್ಕರ | ಪ್ರಸಾರಂಗ ಗುಲ್ಬರ್ಗಾ ವಿಶ್ವ ವಿದ್ಯಾಲಯ–೧೯೯೧ |
| ೫. | ಪ್ರಭಾಕರ ಸಂಝಿಗಿಲಿ | ಡಾ.ಬಿ.ಆರ್.ಅಂಬೇಡ್ಕರ ಜೀವನ ಮತ್ತು ಹೋರಾಟ | ಕ್ರಿಯಾ ಪ್ರಕಾಶನ ಬೆಂಗಳೂರು–೨೦೦೯ |
| ೬. | ಬುದ್ಧ ಘೋಷ ದೇವೇಂದ್ರ ಹೆಗ್ಗಡೆ | ಮತಾಂತರ ಮೀಸಲಾತಿ ಮತ್ತು ಅಂಬೇಡ್ಕರ | ಸಂಬುದ್ಧ ಪ್ರಕಾಶನ ಗುಲ್ಬರ್ಗಾ–೨೦೦೯ |
| ೭. | ಭಾಸ್ಕರ ಟಿ.ಎಂ. | ಬೋಧಿ ವೃಕ್ಷದ ಕೆಳಗೆ | ಮರುಗ ಪ್ರಕಾಶನ ಗುಲ್ಬರ್ಗಾ–೨೦೦೧ |
| ೮. | ಭಾಸ್ಕರ ಟಿ.ಎಂ. | ಆಯ್ದ ತತ್ವ ಪದಗಳು | ಪ್ರಸಾರಂಗ ಗುಲ್ಬರ್ಗಾ ವಿಶ್ವ ವಿದ್ಯಾಲಯ–೨೦೦೭ |
| ೯. | ಮಾಣಿಕರಾವ ಗವಾಯಿ ಕೆ.ಎಸ್. | ಭೀಮಲೀಲಾ ಕವಿತೆಗಳು | – |
| ೧೦. | ಡಾ.ಮೂಡ್ನಾಕೂಡು ಚಿನ್ನಸ್ವಾಮಿ | ಸಾಮಾಜಿಕ ಚಳುವಳಿಗಳು ಬುದ್ಧ ಬಸವ ಬಾಬಾ ಸಾಹೇಬ | ನವಕರ್ನಾಟಕ ಪ್ರಕಾಶನ ಬೆಂಗಳೂರು–೨೦೦೮ |
| ೧೧. | ರಾಜಶೇಖರಯ್ಯ ಎ.ಎಂ. ಮತ್ತು ಇತರರು | ಡಾ. ಬಾಬಾ ಸಾಹೇಬ ಅಂಬೇಡ್ಕರ ಬರಹಗಳು ಮತ್ತು ಭಾಷಣಗಳು | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು–೨೦೦೧ |

| | | | |
|---|---|---|---|
| ೧೨. | ರಾಜಶೇಖರಯ್ಯ ಎ.ಎಂ. ಮತ್ತು ಇತರರು | ಡಾ. ಬಾಬಾ ಸಾಹೇಬ ಅಂಬೇಡ್ಕರ ಬರಹಗಳು ಮತ್ತು ಭಾಷಣಗಳು | ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು–೧೯೯೯ |
| ೧೩. | ಲಿಂಗಯ್ಯಾ ಡಿ. | ಜಾನಪದ: ಸ್ವರೂಪ ಮತ್ತು ಸಾಹಿತ್ಯ | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು–೨೦೦೬ |
| ೧೪. | ಶಿವರಾಂ ಎ.ಆರ್. | ಡಾ.ಅಂಬೇಡ್ಕರ ದರ್ಶನ | ಜೈ ಭೀಮ ಪ್ರಕಾಶನ ಹಾಸನ–೨೦೦೯ |
| ೧೫. | ಸ್ವಾಮಿ ಧರ್ಮ ತೀರ್ಥ | ಹಿಂದೂ ಸಾಮ್ರಾಜ್ಯ ಶಾಹಿಯ ಇತಿಹಾಸ | ಮಹಿಮ ಪ್ರಕಾಶನ ಮೈಸೂರು–೧೯೯೦ |
| ೧೬. | ಪ್ರೋ ಹೂಗಾರ ಬಿ.ಪಿ. | ಮಧ್ಯಕಾಲಿನ ಭಾರತದ ಇತಿಹಾಸ | ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ ಗುಲ್ಬಗಾ–೨೦೦೨ |
| ೧೭. | ಡಾ.ಹೆಬ್ಬಾಳೆ ಜಗನ್ನಾಥ | ಬೀದರ ಜಿಲ್ಲೆಯ ಬುಲಾಯಿ ಹಾಡುಗಳು | ನೀಲಗಂಗಾ ಪ್ರಕಾಶನ ಬೀದರ ೧೯೯೬ |
| ೧೮. | – | ಡಾ.ಬಿ.ಆರ್.ಅಂಬೇಡ್ಕರ ಸಾಧನೆ ಹಾಗೂ ಜೀವನ | ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು–೧೯೮೯ |

